# PACKAGE TOURS

Hotel Room Accom. & South Indian Veg. Food





## Charodham Yatra : 15/19 Days

Oct 07

Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi

## Panchadwarka & Jyothirlinga : 22/24 DAYS

Nov 15 Jan 25

Pushkar, Ajmer, Nathadwar, Kankroli, Eklingji, Udaipur, Mt. Abu, Mathru Gaya, Dwarka, Bet Dwarka, Nagesham, Mul Dwarka, Porbandar, Veraval, Somnath, Dakor, Ahmedabad, Ujjain, Omkareshwar, Parli, Aurangabad, Ellora, Grishneshwar, Nasik, Triyambak, Shirdi, Shanisinganapur, Bhimashankar

## Kashi Chitrakoota : 15 Days

Oct 20 Feb 04

Allahabad, Gaya, Bodhgaya, Kashi, Saranath, Ayodhya, Naimisharanya, Chitrakoot

## Mini Andhra : 05 Days

Dec 04

Manthralaya, Srishailam, Mahanandi, Ahobilam ( Nava Narasimha)

## Andhra Special : 10 Days

Dec 14

Bhadrachalam, Annavaram, Simhachalam, Borra Caves, Draksharam, Vasavi Penugonda, Dwaraka Tirumala, Mangalagiri, Vijayawada

## South India : 10 Days

Jan 24

Guruvayur, Kaladi, Trivandram, Suchindram, Kanyakumari, Rameshwaram, Madurai, Trichy, Srirangam, Tanjore, Kumbakonam, Chidambaram, Thiruvannamalai, Navagraha Temples

## Singapore - Malaysia : 07 Days

Oct 13








**Shri Hansaa Travels**

Recognised by Department of Tourism, Govt. of Karnataka

: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

: 080-26643276 / 26543891 / 9341215612 / 9341415612



# ವಿವೇಕಪ್ರಭ

ಅಕ್ಟೋಬರ್-2018 ಸಂಪುಟ 19 ಸಂಚಿಕೆ 10



## ವಿಶೇಷ ಲೇಖನ



## ಧಾರಾವಾಹಿ














ವ್ಯವಸ್ಥಾಪಕ ಸಂಪಾದಕರು: *ಸ್ವಾಮಿ ಆತ್ಮಜ್ಞಾನಂದ* ಸಂಪಾದಕರು: *ಸ್ವಾಮಿ ಜ್ಞಾನಯೋಗಾನಂದ*

ನೆರವು: *ಆರ್. ಎಸ್. ಪೂರ್ಣಾನಂದ, ಡಾ. ಕೆ. ಎಲ್. ಪ್ರಸನ್ನಾಕ್ಷೀ, ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ: *ಶ್ರೀರಾಮಕೃಷ್ಣ ಆಶ್ರಮ, ಮೈಸೂರು* ಮುದ್ರಣ: *ಮಯೂರ್ ಗ್ರಾಫಿಕ್ಸ್, ಬೆಂಗಳೂರು*


ಮುಖಪುಟ

ಮಹಿಷಾಸುರ ವಧೆ

### ಚಂದಾ ವಿವರ

ಬಿಡಿ ಪ್ರತಿ : ₹ 14 ವಾರ್ಷಿಕ : ₹ 140 ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000 ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್) ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300 ಪೋಷಕರು : $ 600 ಅಥವಾ ಹೆಚ್ಚು.

### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

E-mail: mysuru.vivekaprabha@rkmm.org Website: www.vivekaprabha.net ಫೋನ್ : 9481533505

## ಪ್ರಾರ್ಥನೆ

# ಶ್ರೀಲಕ್ಷ್ಮೀ ಸ್ತುತಿ



**ಹಿರಣ್ಮಯೀಂ ಲಕ್ಷ್ಮೀಂ ಸದಾ ಭಜಾಮಿ**
**ಹೀನ ಮಾನವಾಶ್ರಯಂ ತ್ಯಜಾಮಿ ॥ ಪಲ್ಲವಿ ॥**

**ಚಿರತರ ಸಂಪತ್ಪ್ರದಾಂ ಕ್ಷೀರಾಂಬುಧಿ ತನಯಾಂ**
**ಹರಿವಕ್ಷಸ್ಥಲಾಲಯಾಂ ಹರಿಣೀಂ ಚರಣ ಕಿಸಲಯಾಂ**
**ಕರಕಮಲ ಧೃತ ಕುವಲಯಾಂ**
**ಮರಕತ ಮಣಿಮಯ ವಲಯಾಮ್ ॥ ಅನುಪಲ್ಲವಿ ॥**

**ಶ್ವೇತದ್ವೀಪ ವಾಸಿನೀಂ ಶ್ರೀ ಕಮಲಾಂಬಿಕಾಂ ಪರಾಂ**
**ಭೂತ ಭವ್ಯ ವಿಲಾಸಿನೀಂ ಭೂಸುರ ಪೂಜಿತಾಂ ವರಾಂ**
**ಮಾತರಮಬ್ಜ ಮಾಲಿನೀಂ ಮಾಣಿಕ್ಯಾಭರಣಧರಾಂ**

**ಗೀತವಾದ್ಯ ವಿನೋದಿನೀಂ ಗಿರಿಜಾಂ ತಾಂ ಇಂದಿರಾಂ**
**ಶೀತಕಿರಣ ನಿಭ ವದನಾಂ ಶ್ರಿತ ಚಿಂತಾಮಣಿ ಸದನಾಂ**
**ಪೀತವಸನಾಂ ಗುರುಗುಹ**
**ಮಾತುಲ ಕಾಂತಾಂ ಲಲಿತಾಮ್ ॥**

ಹಿರಣ್ಮಯಿಯಾದ ಲಕ್ಷ್ಮಿಯನ್ನೇ ನಾನು ಸದಾ ಭಜಿಸುತ್ತೇನೆ, ಹೀನ ಮಾನವನ ಆಶ್ರಯವನ್ನು ತ್ಯಜಿಸುತ್ತೇನೆ. ಅವಿನಾಶಿಯಾದ ಸಂಪತ್ತನ್ನು ನೀಡುವ, ಕ್ಷೀರಸಾಗರದ ತನಯೆಯಾದ, ಶ್ರೀವಿಷ್ಣುವಿನ ವಕ್ಷಸ್ಥಳದಲ್ಲಿ ನೆಲೆಸಿರುವ, ಚಿನ್ನದಂತೆ ಶುಭ್ರ ಕಾಂತಿಯಿಂದ ಕೂಡಿರುವ, ಚಿಗುರಿನಂತಹ ಪಾದಗಳುಳ್ಳ, ಕೈಗಳಲ್ಲಿ ಕನ್ನೈದಿಲೆಯನ್ನು ಹಿಡಿದಿರುವ, ಮರಕತ ಮಣಿಯಿಂದ ಕೂಡಿದ ಬಳೆಗಳನ್ನು ಧರಿಸಿರುವ ಆ ಲಕ್ಷ್ಮಿಯನ್ನೇ ನಾನು ಭಜಿಸುತ್ತೇನೆ.

ಆಕೆ ಶ್ವೇತದ್ವೀಪವಾಸಿನಿ ಹಾಗೂ ಪರಾಶಕ್ತಿಯಾದ ಕಮಲಾಂಬಿಕೆಯೇ ಆಗಿರುವಳು. ಅವಳು ಭೂತ, ಭವಿಷ್ಯತ್ತುಗಳಲ್ಲಿ ವಿರಾಜಿಸುವವಳು. ಅವಳು ಶ್ರೇಷ್ಠ ಜನರಿಂದ ಪೂಜಿಸಲ್ಪಡುವವಳೂ, ತಾವರೆ ಹೂಗಳ ಮಾಲೆಯನ್ನೂ ಧರಿಸಿರುವವಳೂ, ಮಾಣಿಕ್ಯಗಳಿಂದ ಕೂಡಿದ ಆಭರಣಗಳನ್ನು ಧರಿಸಿದವಳೂ ಆಗಿದ್ದಾಳೆ. ಗೀತೆ, ವಾದ್ಯಗಳಿಂದ ಕೂಡಿದ ಸಂಗೀತವನ್ನು ಕೇಳಿ ಆಕೆ ಆನಂದಪಡುತ್ತಾಳೆ. ಗಿರಿಜೆಯೇ ಆಗಿರುವ ಆಕೆ ಇಂದಿರೆ. ಚಂದ್ರನಂತಹ ಮುಖದಿಂದ ಕೂಡಿದವಳೂ, ತನ್ನನ್ನು ಆಶ್ರಯಿಸಿದವರಿಗೆ ಚಿಂತಾಮಣಿಯೇ ಆಗಿರುವವಳೂ, ಪೀತಾಂಬರವನ್ನು ಧರಿಸಿರುವವಳೂ ಆಗಿರುವಳು. ಗುರುಗುಹನ ಮಾವನಾದ ವಿಷ್ಣುವಿನ ಪತ್ನಿಯಾದ, ಲಲಿತೆಯೂ ಆಗಿರುವ ಶ್ರೀ ಲಕ್ಷ್ಮಿಯನ್ನೇ ಸದಾ ನಾನು ಭಜಿಸುತ್ತೇನೆ.

— ಮುತ್ತುಸ್ವಾಮಿ ದೀಕ್ಷಿತರು

## ಸೂಕ್ತಿಪ್ರಭ

**ಕ**ಲಿಕೆ ಎಂದಿಗೂ ಮನಸ್ಸನ್ನು ಆಯಾಸಗೊಳಿಸುವುದಿಲ್ಲ.

*— ಲಿಯೊನಾರ್ಡೊ ಡಾ ವಿಂಚಿ*

**ಸಾ**ವಿರ ಮೈಲಿ ದೂರದ ಪ್ರಯಾಣ ಆರಂಭವಾಗುವುದು ಒಂದೇ ಒಂದು ಹೆಜ್ಜೆಯಿಂದ. *— ಲಾವೋ ತ್ಸು*

**ದೇ**ವರು ನಮಗೆ ಈ ಜನ್ಮವೆಂಬ ಕಾಣಿಕೆಯನ್ನು ಕೊಟ್ಟಿದ್ದಾನೆ. ಚೆನ್ನಾಗಿ ಬದುಕುವುದು ಎಂಬ ಕಾಣಿಕೆ ನಮ್ಮ ಕೈಯಲ್ಲಿದೆ.

*— ವಾಲ್ಟೇರ್*

**ಸ**ತ್ಯದ ಕಾಂತಿ ಎಂತಹದೆಂದರೆ, ಯಾರು ಅದನ್ನು ನೋಡುವರೋ ಅವರಿಗೆ ಅದು ಸತ್ಯ ಎಂದು ಸ್ಪಷ್ಟವಾಗಿ ಗೊತ್ತಾಗುವುದು. ಸೂರ್ಯನನ್ನು ನೋಡಬೇಕಾದರೆ ಯಾವ ದೀವಟಿಗೆಯೂ ಬೇಕಾಗಿಲ್ಲ. ಸೂರ್ಯ ಸ್ವಯಂ ಪ್ರಕಾಶಮಾನ. ಸತ್ಯಕ್ಕೆ ಯಾವುದಾದರೂ ಒಂದು ಪ್ರಮಾಣ ಬೇಕಾದರೆ, ಆ ಪ್ರಮಾಣಕ್ಕೆ ಪ್ರಮಾಣ ಯಾವುದು? ಸತ್ಯಕ್ಕೆ ಸಾಕ್ಷಿ ಬೇಕಾದರೆ, ಆ ಸಾಕ್ಷಿಗೆ ಸಾಕ್ಷಿ ಯಾರು? *— ಸ್ವಾಮಿ ವಿವೇಕಾನಂದ*

**ನಾ**ವು ಏನಾಗಿದ್ದೇವೋ ಅದನ್ನು ನಾವು ತಿಳಿಯಬಲ್ಲೆವು; ನಾವು ಏನಾಗಬಲ್ಲೆವು – ಅದನ್ನು ನಾವು ತಿಳಿಯಲಾರೆವು.

*— ವಿಲಿಯಂ ಷೇಕ್ಸ್‌ಪಿಯರ್*

**ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।**
**ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥**

**ಕು**ಲದ ಹಿತಕ್ಕಾಗಿ ಒಬ್ಬನನ್ನು ತ್ಯಾಗ ಮಾಡಬೇಕು. ಗ್ರಾಮದ ಹಿತಕ್ಕಾಗಿ ಕುಲವನ್ನೂ, ದೇಶದ ಹಿತಕ್ಕಾಗಿ ಗ್ರಾಮವನ್ನೂ, ಆತ್ಮನ ಹಿತಕ್ಕಾಗಿ ಪೃಥ್ವಿಯನ್ನೂ ತ್ಯಾಗ ಮಾಡಬೇಕು.

*— ಹಿತೋಪದೇಶ*



# SRI RAMAKRISHNA ADVAITA ASHRAMA

Ashrama Road, Kalady -683574, Dist. Ernakulam, Kerala
Email: kalady@rkmm.org Ph: 0484-2462345/2461071

## ಭಕ್ತರು ಹಾಗೂ ಹಿತೈಷಿಗಳಲ್ಲಿ ಒಂದು ವಿಜ್ಞಾಪನೆ



ಕಾಲಡಿಯು ಶಿವನ ಅವತಾರವಾದ, ಮಹಾನ್ ಆಧ್ಯಾತ್ಮಿಕ ವ್ಯಕ್ತಿಯೂ, ಅದ್ವೈತ ವೇದಾಂತದ ಸಂಸ್ಥಾಪಕರೂ ಆದ **ಆದಿ ಶಂಕರಾಚಾರ್ಯ**ರ ಜನ್ಮಸ್ಥಳವಾಗಿದೆ. ಆಶ್ರಮವು ಪೂರ್ಣಾನದಿಯ ದಡದಲ್ಲಿದೆ. 1936ರಲ್ಲಿ ಆರಂಭವಾದ ಈ ಆಶ್ರಮವು 1941ರಲ್ಲಿ ಬೇಲೂರು ಮಠದ ರಾಮಕೃಷ್ಣ ಮಠಕ್ಕೆ ಸೇರ್ಪಡೆಗೊಂಡಿತು. ಸ್ವಾಮಿ ಬ್ರಹ್ಮಾನಂದರ ಶಿಷ್ಯರಾಗಿದ್ದ ಸ್ವಾಮಿ ಆಗಮಾನಂದರು ಈ ಆಶ್ರಮದ ಸ್ಥಾಪಕ ಅಧ್ಯಕ್ಷರಾಗಿದ್ದರು. ಆಶ್ರಮವು ಆರಂಭವಾದ ನಂತರ ಅದು ಕೇರಳದಲ್ಲಿ ಆಧ್ಯಾತ್ಮಿಕತೆ, ಸಾಮಾಜಿಕ ಅಭಿವೃದ್ಧಿ ಹಾಗೂ ಸೇವಾಕಾರ್ಯಗಳ ಒಂದು ಮುಖ್ಯ ಕಾರ್ಯಕ್ಷೇತ್ರವೆನಿಸಿದೆ. ಕಳೆದ 77 ವರ್ಷಗಳಿಂದ ನಾವು ಸಮಾಜ ಕಲ್ಯಾಣ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಮೂಲ್ಯ ಸೇವೆಯನ್ನು ಅನವರತ ಸಲ್ಲಿಸುತ್ತಿದ್ದೇವೆ.

ಆಶ್ರಮವು ವಿವಿಧ ಶೈಕ್ಷಣಿಕ ಸಂಸ್ಥೆಗಳ, ವಿದ್ಯಾರ್ಥಿನಿಲಯ, ಸಮಾಜ ಕಲ್ಯಾಣ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರಗಳ ಮೂಲಕ ವೈವಿಧ್ಯಮಯವಾದ ಸಮಾಜಸೇವಾ ಕಾರ್ಯಗಳನ್ನು ನಡೆಸುತ್ತಿದೆ. ಈ ಆಶ್ರಮದ ಆವರಣದಲ್ಲಿ ವಿಶ್ವಭ್ರಾತೃತ್ವ ಮಂದಿರ, ಸಭಾಂಗಣಗಳು ಹಾಗೂ ಶಾಲೆಗಳಿವೆ. (ಶಾಲೆಯಲ್ಲಿ ಕಿಂಡರ್‌ಗಾರ್ಟನ್ ನಿಂದ +2 ವರೆಗಿನ ವಿದ್ಯಾರ್ಥಿಗಳು ಓದುತ್ತಿದ್ದಾರೆ. ಅವರಿಗೆ ಶಾಲಾವಾಹನ, ಕ್ರೀಡಾಂಗಣ, ಗ್ರಂಥಾಲಯ ಮೊದಲಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.) 1966ರಿಂದ ಆಶ್ರಮವು ಬುಡಕಟ್ಟು ವಿದ್ಯಾರ್ಥಿನಿಲಯವನ್ನು ನಡೆಸುತ್ತಿದೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ಒಂದು ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರವನ್ನೂ ಆಶ್ರಮ ನಡೆಸುತ್ತಿದ್ದು, ಅದು ಅವರಿಗೆ ಸರ್ಕಾರಿ ಹಾಗೂ ಖಾಸಗಿ ಕಂಪೆನಿಗಳಲ್ಲಿ ಉದ್ಯೋಗ ಪಡೆಯಲು ನೆರವಾಗುತ್ತಿದೆ. ಮುವಾಟ್ಟುಪುಳ ಎಂಬಲ್ಲಿ ಈ ಆಶ್ರಮದ ಉಪಕೇಂದ್ರವೂ ಕಾರ್ಯ ನಿರ್ವಹಿಸುತ್ತಿದೆ.

ಈ ಮೇಲಿನ ಚಟುವಟಿಕೆಗಳನ್ನು ನಡೆಸಿಕೊಂಡು ಬರಲು ಆಶ್ರಮವು ಪ್ರಧಾನವಾಗಿ ನಿಮ್ಮಂತಹ ಭಕ್ತರ ಹಾಗೂ ಹಿತೈಷಿಗಳ ಆರ್ಥಿಕ ನೆರವನ್ನೇ ಆಶ್ರಯಿಸಬೇಕಾಗಿದೆ. ಹಲವು ಬಾರಿ ದಾನ-ದತ್ತಿಗಳ ಕೊರತೆ, ಹಣದುಬ್ಬರ ಮುಂತಾದ ಕಾರಣಗಳಿಂದ ಆರ್ಥಿಕ ಕೊರತೆಯ ಪರಿಸ್ಥಿತಿಯುಂಟಾಗಿದೆ. ಈ ಕಾರಣಗಳಿಂದ ತಾವು ನಮ್ಮ ಉದಾತ್ತ ಸೇವಾಕಾರ್ಯಗಳಿಗೆ ನೆರವಾಗುವಂತೆ, ಉದಾರವಾಗಿ ಧನಸಹಾಯ ಮಾಡಲು ಹಾಗೂ ತಮ್ಮ ಬಂಧು-ಮಿತ್ರರಿಗೂ ಈ ದಿಕ್ಕಿನಲ್ಲಿ ಪ್ರೇರಣೆ ನೀಡಲು ತಮ್ಮನ್ನು ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

| ಕ್ರ. ಸಂ. | ಚಟುವಟಿಕೆ | ವಾರ್ಷಿಕ ವೆಚ್ಚವನ್ನು ಪೂರೈಕೆ ಮಾಡಲು ತಗಲುವ ಕನಿಷ್ಠ ಧನಸಹಾಯ |
|---|---|---|
| 1. | **ನಿತ್ಯ ಸೇವಾಕಾರ್ಯಗಳು** – ಶ್ರೀರಾಮಕೃಷ್ಣರ ಪೂಜೆ, ಜಯಂತಿ ಉತ್ಸವಗಳು, ಆಶ್ರಮ ನಿವಾಸ-ನಿರ್ವಹಣೆ, ನಿತ್ಯ ಅನ್ನದಾನ ಹಾಗೂ ಸಾಧುಸೇವೆ. | 25 ಲಕ್ಷ ರೂ. |
| 2. | **ಶೈಕ್ಷಣಿಕ** – ಶಾಲಾ ಚಟುವಟಿಕೆಗಳ ನಿರ್ವಹಣೆ, ಕಟ್ಟಡಗಳ ನಿರ್ವಹಣೆ, ಶಾಲಾ ಚಟುವಟಿಕೆಗಳ ಆಧುನೀಕರಣ ಹಾಗೂ ಉನ್ನತೀಕರಣ, ಬಡ ವಿದ್ಯಾರ್ಥಿಗಳಿಗೆ ನೆರವು ನೀಡುವ ನಿಧಿ, ಸ್ಕಾಲರ್‌ಶಿಪ್ ಇತ್ಯಾದಿ. | 10 ಲಕ್ಷ ರೂ. |
| 3. | **ಸಮಾಜ ಅಭಿವೃದ್ಧಿ ಹಾಗೂ ಕಲ್ಯಾಣ ಸೇವಾಕಾರ್ಯಗಳು** – ಶ್ರೀರಾಮಕೃಷ್ಣ ಗುರುಕುಲಂ ವಿದ್ಯಾರ್ಥಿನಿಲಯದ ಖರ್ಚುವೆಚ್ಚಗಳು, ಪರಿಶಿಷ್ಟ ವರ್ಗ ಕಲ್ಯಾಣ, ಪರಿಶಿಷ್ಟ ಜಾತಿ ತರಬೇತಿ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರ, ಬಡವರಿಗೆ ಹಾಗೂ ವಿಧವೆಯರಿಗೆ ಆರ್ಥಿಕ ನೆರವು ಇತ್ಯಾದಿ. | 15 ಲಕ್ಷ ರೂ. |
| 4. | **ಹೊಸ ಜನರೇಟರ್ ಖರೀದಿ** – ಮಂದಿರ, ಆಫೀಸು, ಗುರುಕುಲ ವಿದ್ಯಾರ್ಥಿನಿಲಯ, ಸಾಧು ನಿವಾಸ ಹಾಗೂ ಅತಿಥಿ ಗೃಹ ಇವುಗಳಿಗೆ ಹೆಚ್ಚುವರಿ ವಿದ್ಯುತ್ ಪೂರೈಕೆಗಾಗಿ. | 6 ಲಕ್ಷ ರೂ. |

ತಮ್ಮ ದೇಣಿಗೆಯನ್ನು ನೀವು ಚೆಕ್/ಡಿ.ಡಿ.(''Sri Ramakrishna Advaita Ashrama'' ಹೆಸರಿನಲ್ಲಿ), ಇಲೆಕ್ಟ್ರಾನಿಕ್ ವರ್ಗಾವಣೆ ಮೂಲಕ ಕಳುಹಿಸಬಹುದು. (Canara Bank, Kalady IFSC Code CNRB0002921 Account Number 2921101005444.) ದೇಣಿಗೆಯನ್ನು ಕಳುಹಿಸಿದ ಬಳಿಕ ತಮ್ಮ ಹೆಸರು, ಪೂರ್ಣ ವಿಳಾಸ, ಪ್ಯಾನ್ ನಂಬರ್ ಇವನ್ನು kalady@rkmm.org ಈ ವಿಳಾಸಕ್ಕೆ ಇ-ಮೇಲ್ ಮೂಲಕ ಕಳುಹಿಸಿಕೊಡಬೇಕು. ನೀವು ನೀಡುವ ದೇಣಿಗೆಯು ಆದಾಯ ತೆರಿಗೆ ಕಾಯಿದೆಯ u/s 80G ತೆರಿಗೆ ವಿನಾಯಿತಿ ಪಡೆಯಲು ಅರ್ಹ ವಾಗಿರುತ್ತದೆ. ರೂ.25,000/- ಕ್ಕೂ ಹೆಚ್ಚಿನ ಮೊತ್ತವನ್ನು ದತ್ತಿಯನ್ನಾಗಿ ಪರಿಗಣಿಸಿ ಸ್ವೀಕರಿಸಲಾಗುವುದು.

ಭಗವಾನ್ ಶ್ರೀರಾಮಕೃಷ್ಣರು ನಿಮ್ಮ ಎಲ್ಲ ಕಾರ್ಯಚಟುವಟಿಕೆಗಳಲ್ಲಿ ತಮ್ಮ ಕೃಪೆಯನ್ನು ಹರಿಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಭಗವತ್ಸೇವೆಯಲ್ಲಿ ತಮ್ಮ,
ಸ್ವಾಮಿ ಶ್ರೀವಿದ್ಯಾನಂದ
ಅಧ್ಯಕ್ಷರು



ಆತ್ಮವಂಚಕನಾಗಬೇಡ; ಸತ್ಯಸಂಧನಾಗಿರು. ನಿನ್ನ ಆಲೋಚನೆಯಂತೆ ಮಾಡು. ನೀನು ನಿಜವಾಗಿಯೂ ಮುಂದುವರಿಯುವೆ. ಸತ್ಯವಾಗಿಯೂ ಸರಳ ಹೃದಯದಿಂದ ದೇವರನ್ನು ಪ್ರಾರ್ಥಿಸು. ನಿನ್ನ ಪ್ರಾರ್ಥನೆ ದೇವರಿಗೆ ಕೇಳುವುದು.

— ಶ್ರೀರಾಮಕೃಷ್ಣರು



ಮೃತ್ಯು ಯಾವಾಗಲೂ ಅನಿಶ್ಚಿತವಾಗಿರುವುದರಿಂದ, ಅವಕಾಶ ಬಂದಾಗಲೆಲ್ಲ ಪುಣ್ಯಕಾರ್ಯಗಳನ್ನು ಮಾಡುತ್ತ ಹೋಗು. ಸೂಕ್ತ ಸಮಯಕ್ಕಾಗಿ ಕಾಯುತ್ತಿರಬೇಡ. ಮೃತ್ಯು ಕಾಲಾಕಾಲ ವಿವೇಚನೆ ನಡೆಸುವುದಿಲ್ಲ.

— ಶ್ರೀಮಾತೆ ಶಾರದಾದೇವಿ



ಮಾನವ ದೇವರನ್ನು ಅರಿತು ದೇವನಾಗಬೇಕಾಗಿದೆ. ಆಧ್ಯಾತ್ಮಿಕ ಶೈಶವಾವಸ್ಥೆಯಲ್ಲಿರುವಾಗ ವಿಗ್ರಹ, ದೇವಸ್ಥಾನ, ಚರ್ಚು, ಗ್ರಂಥಗಳು ಮುಂತಾದುವು ಅವನಿಗೆ ಸಹಾಯ ಮಾಡುವುವು. ಆದರೆ ಅವನು ಅಲ್ಲೇ ನಿಲ್ಲಕೂಡದು, ಮುಂದೆ ಮುಂದೆ ಹೋಗುತ್ತಿರಬೇಕು.

— ಸ್ವಾಮಿ ವಿವೇಕಾನಂದ



# ಶ್ರೀರಾಮಕೃಷ್ಣ ಶಾರದಾಶ್ರಮ

ಪೊನ್ನಂಪೇಟೆ –571 216, ಕೊಡಗು ಜಿಲ್ಲೆ. ಫೋನ್: 08274–298244, 249555

srksevaponnampet@gmail.com Web: www.rkmponnampet.org

## ಆಧ್ಯಾತ್ಮಿಕ ಶಿಬಿರ

### 21–10–2018 ರಿಂದ 23–10–2018

ಪೊನ್ನಂಪೇಟೆಯಲ್ಲಿ ನಿರ್ಮಾಣವಾಗಿರುವ ಶ್ರೀರಾಮಕೃಷ್ಣ ವಿಶ್ವಭಾವೈಕ್ಯ ಮಂದಿರದ **9**ನೇ ವಾರ್ಷಿಕೋತ್ಸವದ ಪ್ರಯುಕ್ತ, **2018 ಅಕ್ಟೋಬರ್ 21 ರಿಂದ 23 ರವರೆಗೆ,** ಆಶ್ರಮದಲ್ಲಿ 3 ದಿನಗಳ ಆಧ್ಯಾತ್ಮಿಕ ಶಿಬಿರವನ್ನು ಅಯೋಜಿಸಲಾಗಿದೆ. ರಾಮಕೃಷ್ಣ ಮಠದ ಹಿರಿಯ ಯತಿಗಳಾದ ಸ್ವಾಮಿ ಜಗದಾತ್ಮಾನಂದಜಿ, ರಾಘವೇಶಾನಂದಜಿ, ನಿತ್ಯಸ್ಥಾನಂದಜಿ, ಆತ್ಮಜ್ಞಾನಂದಜಿ ಮತ್ತಿತರರು ಈ ಶಿಬಿರದಲ್ಲಿ ಭಕ್ತರಿಗೆ ಮಾರ್ಗದರ್ಶನ ನೀಡಲಿದ್ದಾರೆ. ಶಿಬಿರದಲ್ಲಿ ಇತರ ಸಾಂಸ್ಕೃತಿಕ ಕಾರ್ಯಕ್ರಮಗಳೂ ಆಯೋಜಿತವಾಗಿವೆ.

**ನೋಂದಣಿ ಶುಲ್ಕ** : *ವಸತಿ ರಹಿತ :* **ರೂ. 800/–** *ವಸತಿ ಸಹಿತ :* **ರೂ. 1500/–**

**ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ : 15.10.2018**

(ಅರ್ಜಿಯಲ್ಲಿ ಹೆಸರು, ವಯಸ್ಸು, ವಿಳಾಸ ಮತ್ತು ದೂರವಾಣಿ ಸಂಖ್ಯೆಗಳನ್ನು ನೀಡಬೇಕು. ನಿಗದಿತ ಅರ್ಜಿಗಾಗಿ ಆಶ್ರಮದ ವೆಬ್‌ಸೈಟ್ ನೋಡಿ.)

*ವಿ.ಸೂ: ಎಲ್ಲ ಕಾರ್ಯಕ್ರಮಗಳೂ ಆಶ್ರಮದಲ್ಲೇ ನಡೆಯುತ್ತವೆ. ಗೋಣಿಕೊಪ್ಪಲು ಕೂರ್ಗ್ ಪಬ್ಲಿಕ್ ಸ್ಕೂಲ್‌ನಲ್ಲಿ ಭಕ್ತರಿಗೆ ಅನುಕೂಲವಾಗುವಂತೆ ವಸತಿ ವ್ಯವಸ್ಥೆ ಮಾಡಲಾಗಿದೆ. 21.10.2018 ರಂದು 5.30ಕ್ಕೆ ಬೆಂಗಳೂರಿನಿಂದ ಪೊನ್ನಂಪೇಟೆಗೆ ಬಸ್ ವ್ಯವಸ್ಥೆ ಮಾಡಲಾಗಿದೆ. ಬಸ್ ಬುಕಿಂಗ್‌ಗಾಗಿ ಸ್ವಯಂಸೇವಕರಾದ ಶ್ರೀ ಕೆ.ವಿ. ಸುದರ್ಶನ್ ಕುಮಾರ್/ ರಾಜಣ್ಣ ಅವರನ್ನು ಸಂಪರ್ಕಿಸಿ: ಫೋ.ನಂ. 9845005273/ 8867725723*

ಭಕ್ತಾದಿಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ದಿವ್ಯತ್ರಯರ ಕೃಪೆಗೆ ಪಾತ್ರರಾಗಬೇಕೆಂದು ಕೋರುತ್ತೇವೆ.

*RTGSಗಾಗಿ ಬ್ಯಾಂಕ್ ವಿವರಗಳು:*

Sri Ramakrishna Sharadashrama, Ponnampet.

Corporation Bank, SB. A/c.no.520101041841472.

IFSC Code : CORP0000032 (ಪತ್ರ ಅಥವಾ ಇ-ಮೇಲ್ ಮೂಲಕ ವಿವರಗಳನ್ನು ತಿಳಿಸಿರಿ.)

ಭಗವತ್ಸೇವೆಯಲ್ಲಿ ತಮ್ಮ,

ಸ್ವಾಮಿ ಬೋಧಸ್ವರೂಪಾನಂದ

ಅಧ್ಯಕ್ಷರು

# ವೇದ, ವೇದಾಂತಗಳ ಮಹತ್ವ

ನಮ್ಮ ದೇಶದಲ್ಲಿ ಬೆಳೆದು ಬಂದ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯಲ್ಲಿ ವೇದ ಹಾಗೂ ವೇದಾಂತಗಳಿಗೆ ಅತಿಹೆಚ್ಚಿನ ಪ್ರಾಧಾನ್ಯವಿದೆ. ಯಾವುದೇ ಸಂದಿಗ್ಧತೆ ಎದುರಾಗಲಿ, ಧರ್ಮ-ಕರ್ಮ, ತತ್ತ್ವ-ಆಚರಣೆಗೆ ಸಂಬಂಧಿಸಿದ ಸಮಸ್ಯೆಗಳು ಉದ್ಭವಿಸಲಿ, 'ವೇದ ಏನು ಹೇಳುತ್ತದೆ?' ಎಂಬುದೇ ಎಲ್ಲಕ್ಕಿಂತ ಮುಖ್ಯವಾದ ಪ್ರಮಾಣ. ವೇದವನ್ನು ವಿರೋಧಿಸುವ ಎಲ್ಲವೂ ತ್ಯಾಜ್ಯ ಎಂಬುದು ಸರ್ವಮಾನ್ಯವಾದ, ಸ್ವೀಕೃತವಾದ ವಿಚಾರ. ವೇದವನ್ನು ವಿರೋಧಿಸಿ, ಅದಕ್ಕೆ ವಿಮುಖವಾಗಿ ಹೋದ ಪಂಗಡಗಳು (ಜೈನ, ಬೌದ್ಧ ಇತ್ಯಾದಿ) ಬೇರೆಯೇ ಧರ್ಮಗಳಾದವು; 'ವೈದಿಕ' ಧರ್ಮದ ಚೌಕಟ್ಟಿನಲ್ಲಿ ಉಳಿಯಲಿಲ್ಲ. ಇಂದು ನಾವು ಹಿಂದೂ ಧರ್ಮವೆಂದು ಕರೆಯುವುದು ವೇದವನ್ನು ಅನುಸರಿಸುವ ಈ ವೈದಿಕ ಧರ್ಮವನ್ನೇ. ವೇದಗಳು ಅನಾದಿ ಹಾಗೂ ಅನಂತ; ಅವುಗಳಿಗೆ ನಾಶವಿಲ್ಲ; ಆದ್ದರಿಂದ ಆರಂಭವೂ ಇಲ್ಲ— ಯಾವಾಗಲೂ ಅದು ಇತ್ತು ಎಂದು ನಮ್ಮ ಪರಂಪರೆ ನಂಬುತ್ತದೆ. ಆದ್ದರಿಂದ ಇದನ್ನು 'ಸನಾತನ ಧರ್ಮ'ವೆಂದೂ ಕರೆಯುತ್ತಾರೆ. ವೈದಿಕ ಧರ್ಮವೆಂದರೂ ಸರಿ; ಸನಾತನ ಧರ್ಮವೆಂದರೂ ಸರಿ; ಅಥವಾ ಹಿಂದೂಧರ್ಮವೆಂದರೂ ಸರಿ — ಇದು ವೇದವನ್ನು ಅನುಸರಿಸುವ, ಅಥವಾ ವೇದಕ್ಕೇ ಪಾರಮ್ಯವನ್ನು ನೀಡಿರುವ ಒಂದು ಪರಂಪರೆ ಎಂಬುದು ಮುಖ್ಯ.

## 'ವೇದ' ಎಂದರೇನು?

'ವಿದ್' ಎಂದರೆ 'ತಿಳಿಯುವುದು', 'ಅರಿತುಕೊಳ್ಳುವುದು' ಎಂದರ್ಥ. ಹೀಗೆ ಅರಿತುಕೊಂಡ ಜ್ಞಾನವೇ 'ವೇದ'. ಅರಿವು ಎಂಬುದನ್ನು ಸಾಮಾನ್ಯ ಅಕ್ಷರ ಕಲಿಕೆ, ಲೌಕಿಕ ವಿದ್ಯೆಯ ತಿಳುವಳಿಕೆ ಎಂಬಲ್ಲಿಂದ ಆರಂಭಿಸಿ, ಎಲ್ಲ ವಿದ್ಯೆಗಳನ್ನು ಮೀರಿದ 'ಪರಾವಿದ್ಯೆ'ಯಾದ ಬ್ರಹ್ಮಜ್ಞಾನದವರೆಗೂ ವಿಸ್ತರಿಸಬಹುದು. ವೇದಗಳಲ್ಲಿ ಅರಿವಿನ, ಜ್ಞಾನದ ಮಹತ್ವ ವಿಶೇಷವಾಗಿ ಕಂಡುಬರುತ್ತದೆ. ಲೌಕಿಕ ಜ್ಞಾನಕ್ಕಿಂತ, ಪಾರಮಾರ್ಥಿಕ ಜ್ಞಾನವೇ ಇಲ್ಲಿ ಮುಖ್ಯ. ದೇವರು, ಭಗವಂತ, ಪುರುಷ, ಆತ್ಮ, ಬ್ರಹ್ಮ ಇತ್ಯಾದಿ ಹೆಸರುಗಳಿಂದ ಕರೆಯಲಾಗುವ ಮಹಿಮಾನ್ವಿತ ಶಕ್ತಿಯ ಉಪಾಸನೆ, ಅದನ್ನು ಕುರಿತ ಜಿಜ್ಞಾಸೆ ಹಾಗೂ ತಪಸ್ಸು-ಯೋಗ-ಧ್ಯಾನಗಳಿಂದ ಆ ಶಕ್ತಿಯ ಸಾಕ್ಷಾತ್ಕಾರ — ಹೀಗೆ ಈ ಲೋಕವನ್ನು ಮೀರಿದ ಸತ್ಯವೊಂದರ ಅನ್ವೇಷಣೆ ಇಲ್ಲಿ ಕಂಡುಬರುತ್ತದೆ. ಅಲೌಕಿಕ ಸತ್ಯದ, ಪಾರಮಾರ್ಥಿಕ ವಿಚಾರಗಳ ವಿಷಯವಾಗಿ ಅರ್ಥಗರ್ಭಿತವಾದ ಮಂತ್ರಗಳು ವೇದಸಾಹಿತ್ಯದ ಉದ್ದಕ್ಕೂ ಕಂಡುಬರುತ್ತವೆ. ಆದ್ದರಿಂದಲೇ ವೇದಗಳಲ್ಲಿ ಬರುವ ಪದ್ಯ, ಗದ್ಯಗಳಿಂದ ಕೂಡಿದ ರಚನೆಗಳಿಗೆ 'ಮಂತ್ರ'ವೆನ್ನುತ್ತಾರೆ. ಯಾವುದರ ದೀರ್ಘ ಮನನದಿಂದ ಈ ಸಾಂಸಾರಿಕ ಬಂಧನದಿಂದ ಬಿಡುಗಡೆ ದೊರಕುವುದೋ (*'ಮನನಾತ್ ತ್ರಾಯತೇ ಇತಿ ಮಂತ್ರಃ'*) ಅದುವೇ ಮಂತ್ರ. ಈ ಮಂತ್ರಗಳನ್ನು ಯಾರೂ ಛಂದೋಬದ್ಧ ಶ್ಲೋಕಗಳಲ್ಲಿ ಕವಿತೆ ಬರೆಯುವಂತೆ ಬರೆಯಲಿಲ್ಲ. ಮೂಲತಃ ಅದೊಂದು ದರ್ಶನವಾಗಿತ್ತು. ಆಳವಾದ ಧ್ಯಾನ, ತಪಸ್ಸುಗಳಿಂದ ವೈದಿಕ ಋಷಿಗಳು ಕೆಲವು ಅಸಾಧಾರಣ ಅನುಭವಗಳನ್ನು ಪಡೆದರು. ದೇವತೆಗಳು, ಸತ್ಯ, ಋತ (ಸಾರ್ವತ್ರಿಕ ನಿಯಮಗಳು), ಆತ್ಮ, ಬ್ರಹ್ಮ ಇವೇ ಮುಂತಾದವನ್ನು ಅವರು ಸಾಕ್ಷಾತ್ತಾಗಿ ಕಂಡರು. ಇಂಥ ದರ್ಶನಗಳನ್ನು ಪಡೆದ ಋಷಿಗಳು 'ಮಂತ್ರದ್ರಷ್ಟಾರರು' ಎನ್ನಿಸಿಕೊಂಡರು. ಹೀಗೆ ಅವರು ಪಡೆದ ಅಲೌಕಿಕ ಅನುಭವಗಳೇ ವೇದಗಳಿಗೆ ಮೂಲ. ತಾವು ಪಡೆದ ಅನುಭವಗಳನ್ನು ಇತರರಿಗೂ ತಿಳಿಸಿಕೊಡುವ, ಆ ಮೂಲಕ ಮನುಕುಲಕ್ಕೆ ತಮ್ಮ ದಾರ್ಶನಿಕ ಸತ್ಯಗಳನ್ನು ದಾಟಿಸುವ ಹಂಬಲ ಆ ಋಷಿಗಳಿಗೆ ಉಂಟಾಯಿತು. ಕೇವಲ ತಮ್ಮ ಆನಂದದಲ್ಲಷ್ಟೇ ತೃಪ್ತಿಹೊಂದದೆ, ಇತರರಿಗೂ ತಮ್ಮ ಆನಂದವನ್ನು ಹಂಚುವ, ಆ ಮೂಲಕ ಎಲ್ಲರೂ ಆನಂದದಲ್ಲಿ ನಲಿದಾಡೋಣ ಎಂಬ ವಿಶಾಲ ಹೃದಯದ ಹಂಬಲವದು. ಹೀಗೆ ಋಷಿಮುನಿಗಳು ತಮ್ಮ ದಿವ್ಯಾನುಭವಗಳನ್ನು ಭಾಷೆಯಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದರು. ಈ ಪ್ರಯತ್ನದ ಫಲವೇ 'ವೇದಸಾಹಿತ್ಯ.'

ಈ ರೀತಿ ತಮ್ಮ ಅನುಭವಗಳನ್ನು ಭಾಷೆಯಲ್ಲಿ ಹಿಡಿದಿಡುವಾಗ ಋಷಿಗಳಿಗೆ ಸಹಜವಾಗಿಯೇ ಕೆಲವು ಸವಾಲುಗಳು ಎದುರಾದವು. ಮೊದಲನೆಯ ಸವಾಲೆಂದರೆ, ಮಾತು-ಮನಸ್ಸು-ಬುದ್ಧಿಗಳನ್ನು ಮೀರಿದ ಆಧ್ಯಾತ್ಮಿಕ ಅನುಭವಗಳನ್ನು ಮಾತಿನಲ್ಲಿ ಹಿಡಿದಿಡುವುದು ಹೇಗೆ ಸಾಧ್ಯ? ಇದಕ್ಕೆ ಅವರು ಕಂಡುಕೊಂಡ ಪರಿಹಾರವೇ — ಕಾವ್ಯಭಾಷೆಯಲ್ಲಿ ಅವುಗಳನ್ನು ವರ್ಣಿಸುವುದು.

ಅದೇ ರೀತಿ, ದ್ವಂದ್ವಗಳಿಂದ ಕೂಡಿದ, 'ಹೀಗಲ್ಲ, ಇದಲ್ಲ' ಎಂದು ನಿಷೇಧಾತ್ಮಕ ವಿವರಣೆಗಳಿಂದ ಕೂಡಿದ ವರ್ಣನೆ ಇನ್ನೊಂದು ವಿಧಾನ. ಈ ಮೂಲಕ ಮಾನವ ಮನಸ್ಸು ಅರಿಯಬಹುದಾದ, ಕಲ್ಪಿಸಿಕೊಳ್ಳಬಹುದಾದ ಸಾಧ್ಯತೆಗಳನ್ನು ದಾಟಿಹೋಗಿ, ಅದರಾಚೆಗೆ ತನ್ನ ಅರಿವನ್ನು ವಿಸ್ತರಿಸುವಂತೆ ಮಾಡುವ ಪ್ರಯತ್ನ. ಎರಡನೆಯ ಸವಾಲು, ಎಷ್ಟೇ ಸಮರ್ಥವಾಗಿ ವರ್ಣಿಸಿ, ವಿವರಿಸಿ ಹೇಳಿದರೂ ಮೂಲ ಅನುಭವವನ್ನು ಸಂಪೂರ್ಣ ಭಾಷೆಯಲ್ಲಿ ಹಿಡಿದಿಡಲು ಸಾಧ್ಯವಿಲ್ಲ; ಒಂದಲ್ಲ ಒಂದು ಊನ ಉಂಟಾಗಿಯೇ ತೀರುತ್ತದೆ. ಇಂಥ ಪರಿಸ್ಥಿತಿಯಲ್ಲಿ ತಮ್ಮ ಮೂಲ ಅನುಭವವನ್ನು ಇತರರಿಗೆ ಸಮಗ್ರವಾಗಿ ದಾಟಿಸುವುದು ಹೇಗೆ? ಇದಕ್ಕೆ ಪರಿಹಾರವೊಂದೇ — ನೇರವಾಗಿ ಶಿಷ್ಯನು ಗುರುವಿನಿಂದ ಕಲಿತು, ಉಪದೇಶ ಪಡೆದು, ಸ್ವತಃ ತಾನೇ ಸಾಧನೆಯಲ್ಲಿ ತೊಡಗಬೇಕು. ಸ್ವತಃ ತಾನೇ ಆರ್ಜಿಸಿಕೊಂಡಲ್ಲದೆ, ತನ್ನ ಆಧ್ಯಾತ್ಮಿಕ ಅನುಭವವನ್ನು ಇನ್ನೊಬ್ಬನಿಗೆ ದಾಟಿಸಲಾಗದು ಎಂಬುದನ್ನು ಕೂಡ ಅವರು ಕಂಡುಕೊಂಡರು. ವೇದಗಳು ಈ ಪ್ರಯತ್ನಕ್ಕೆ ಹಾಗೂ ಸಾಧಕನಿಗೆ ಸಹಾಯಕವಷ್ಟೇ ಎಂಬುದನ್ನು ಅವರು ಸ್ಪಷ್ಟವಾಗಿ ತಿಳಿದುಕೊಂಡಿದ್ದರು. ಈ ಕಾರಣಕ್ಕಾಗಿಯೇ ಮುಂಡಕೋಪನಿಷತ್ತಿನಲ್ಲಿ ವೇದಗಳನ್ನು 'ಅಪರಾ ವಿದ್ಯೆ'ಯೆಂದು ಕರೆದಿರಬೇಕು.

ವೇದಗಳ ರಚನೆ ಈ ರೀತಿ ಉಂಟಾಯಿತು. ವೇದಗಳಲ್ಲಿರುವ ಮಂತ್ರಗಳನ್ನು ಋಷಿಗಳು ತಮ್ಮ ಶಿಷ್ಯಂದಿರಿಗೋ, ಮಕ್ಕಳಿಗೋ ಹೇಳಿಕೊಟ್ಟರು. ಆ ಶಿಷ್ಯಂದಿರು ತಮ್ಮ ಮಕ್ಕಳಿಗೆ ಹಾಗೂ ಶಿಷ್ಯಂದಿರಿಗೆ ಅವುಗಳನ್ನು ಕಲಿಸಿದರು. ಹೀಗೆ ತಲೆಮಾರಿನಿಂದ ತಲೆಮಾರಿಗೆ ವೇದಗಳು ಹರಿದುಬಂದವು. ಮೊದಮೊದಲಿಗೆ ವೇದಮಂತ್ರಗಳ ಸಂಖ್ಯೆ ಕಡಿಮೆಯಿದ್ದಿರಬೇಕು; ಅವುಗಳನ್ನೆಲ್ಲ ಕಂಠಪಾಠ ಮಾಡಿ ನೆನಪಿನಲ್ಲಿಟ್ಟುಕೊಂಡೇ ಕಲಿಯುತ್ತಿದ್ದರು. ಅವುಗಳನ್ನೆಂದೂ ಬರೆದಿಡುತ್ತಿರಲಿಲ್ಲ. ಕ್ರಮೇಣ ಮಂತ್ರಗಳ ಸಂಖ್ಯೆ ಹೆಚ್ಚಾಯಿತು; ಎಲ್ಲವನ್ನೂ ಕಲಿತು ನೆನಪಿನಲ್ಲಿಟ್ಟುಕೊಳ್ಳುವುದು ಅಸಾಧ್ಯವೆನಿಸಿತು. ಅದಲ್ಲದೆ, ತಲೆಮಾರುಗಳು ಕಳೆದು ಹೋದಂತೆ ಜನರ ನೆನಪಿನ ಶಕ್ತಿಯೂ ಕುಂದುತ್ತ ಬಂತು. ಈ ಕಾರಣಗಳಿಂದ ಒಂದೇ ಆಗಿದ್ದ ವೇದವನ್ನು ವ್ಯಾಸ ಮಹರ್ಷಿಗಳು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ — ಎಂದು ನಾಲ್ಕಾಗಿ ವಿಂಗಡಿಸಿ, 'ವೇದವ್ಯಾಸ'ರೆನಿಸಿದರು. ತಮ್ಮ ನಾಲ್ಕು ಮಂದಿ ಶಿಷ್ಯಂದಿರಿಗೆ ಒಂದೊಂದು ವೇದವನ್ನು ಕಲಿಸಿ, ಅವರು ಅದನ್ನೇ ಪ್ರಚಾರ ಮಾಡಿ ತಮ್ಮ ಶಿಷ್ಯಪರಂಪರೆಯ ಮೂಲಕ ವೇದಗಳನ್ನು ಕಾಪಾಡಿಕೊಳ್ಳುವದು ಸಾಧ್ಯವಾಯಿತು. ಈ ರೀತಿಯಲ್ಲಿ ವೇದರಕ್ಷಣೆಯ ಕಾರ್ಯವೂ ನಡೆಯಿತು. ವೇದಗಳ ಪಾವಿತ್ರ್ಯ, ಅದಕಿದ್ದ ಮಹತ್ವ ಇದರಿಂದ ಸ್ಪಷ್ಟವಾಗುತ್ತದೆ.

ವಿಷಯಕ್ಕನುಗುಣವಾಗಿ ವೇದಗಳನ್ನು ಕರ್ಮಕಾಂಡ, ಜ್ಞಾನಕಾಂಡಗಳೆಂದು ವಿಭಾಗಿಸುತ್ತಾರೆ. ಯಜ್ಞಯಾಗಾದಿಗಳಿಗೆ ಬೇಕಾದ ಮಂತ್ರಗಳು, ಅವುಗಳನ್ನು ಮಾಡುವ ವಿಧಿವಿಧಾನ ಮುಂತಾದ ವಿಷಯಗಳನ್ನು ಒಳಗೊಂಡಿರುವ ವೇದಗಳ ಮೊದಲ ಭಾಗಗಳನ್ನು (ಸಂಹಿತೆ, ಬ್ರಾಹ್ಮಣ, ಆರಣ್ಯಕ) ಕರ್ಮಕಾಂಡಗಳೆಂದೂ, ವೇದಗಳ ಅಂತಿಮ ಭಾಗಗಳಲ್ಲಿ ಬರುವ ಉಪನಿಷತ್ತುಗಳಲ್ಲಿ ಜಿಜ್ಞಾಸೆ, ವಿಚಾರ ಹಾಗೂ ಜ್ಞಾನಸಾಧನೆಯೇ ಪ್ರಧಾನವಾಗಿರುವುದರಿಂದ ಅದನ್ನು ಜ್ಞಾನಕಾಂಡಗಳೆಂದೂ ಕರೆಯುವುದು ವಾಡಿಕೆ. ಉಪನಿಷತ್ತುಗಳಲ್ಲಿ ಆತ್ಮ, ಬ್ರಹ್ಮ, ಸತ್ಯ, ಮುಂತಾದ ಪಾರಮಾರ್ಥಿಕ ವಿಷಯವೇ ಹೆಚ್ಚಾಗಿ ಬರುತ್ತವೆ. ಒಟ್ಟು ವೇದಗಳ ಸಾರವೇ ಈ ಉಪನಿಷತ್ತುಗಳಲ್ಲಿವೆ ಎನ್ನುತ್ತಾರೆ. ಆದ್ದರಿಂದ 'ವೇದಾಂತ'ವೆಂದರೆ ಪ್ರಧಾನವಾಗಿ ಉಪನಿಷತ್ತುಗಳು. ಹತ್ತಾರು ಪ್ರಮುಖ ಉಪನಿಷತ್ತುಗಳಲ್ಲಿ ಹರಡಿರುವ ವಿಚಾರಗಳನ್ನೆಲ್ಲ ಒಂದು ತಾರ್ಕಿಕ ಕ್ರಮಕ್ಕೊಳಪಡಿಸಿ ರಚಿಸಿದ ಒಂದು ಪ್ರಧಾನ ಕೃತಿಯೇ 'ಬ್ರಹ್ಮಸೂತ್ರ'. ಅದೇ ರೀತಿ, ಉಪನಿಷತ್ತಿನ ಸಾರವನ್ನೆಲ್ಲ ಸರಳವಾಗಿ ಬೋಧಿಸಿದ ಮಹತ್ವದ ಕೃತಿಯೇ 'ಭಗವದ್ಗೀತೆ.' ಹೀಗೆ ಉಪನಿಷತ್ತುಗಳು, ಬ್ರಹ್ಮಸೂತ್ರ, ಗೀತೆ — ಇವು ಮೂರನ್ನೂ ವೇದಾಂತದ ಪ್ರಧಾನ ಗ್ರಂಥಗಳಾಗಿ ಪರಿಗಣಿಸುತ್ತಾರೆ.

ಇವುಗಳಲ್ಲಿ ಉಪನಿಷತ್ತುಗಳು ವೇದ ಅಥವಾ ಶ್ರುತಿಗೆ (ಅಂದರೆ 'ಕೇಳಿದ್ದು' ಎಂದರ್ಥ) ಸೇರಿದ್ದು; ಅದು **ಶ್ರುತಿಪ್ರಸ್ಥಾನ.** ಬ್ರಹ್ಮಸೂತ್ರವು ತರ್ಕಪ್ರಧಾನವಾಗಿದೆ; ಅದು **ನ್ಯಾಯ ಪ್ರಸ್ಥಾನ**ವೆಂದು ಕರೆಯಲ್ಪಟ್ಟಿದೆ. ಭಗವದ್ಗೀತೆ ಇತಿಹಾಸ ಗ್ರಂಥವೆಂದು ಕರೆಯಲಾದ ಮಹಾಭಾರತದ ಭಾಗವಾದ್ದರಿಂದ ಅದನ್ನು '**ಸ್ಮೃತಿ ಪ್ರಸ್ಥಾನ**' ವೆನ್ನುತ್ತಾರೆ. ಈ ಪ್ರಸ್ಥಾನತ್ರಯಗಳಿಗೆ ಶ್ರೀಶಂಕರರು ಪ್ರಸಿದ್ಧವಾದ ಭಾಷ್ಯಗಳನ್ನು ಬರೆದು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. '**ವೇದಾಂತ**'ವೆಂದರೆ ಉಪನಿಷತ್ತು, ಬ್ರಹ್ಮಸೂತ್ರ, ಗೀತೆ ಹಾಗೂ ಇವುಗಳಿಗೆ ಬರೆದ ಶಂಕರ, ರಾಮಾನುಜ ಮೊದಲಾದವರ ಭಾಷ್ಯಗಳು; ಈ ಭಾಷ್ಯಗಳ ಮೇಲೆ ಬರೆದ ಟೀಕೆ, ವಾರ್ತಿಕಗಳು, ಇದಲ್ಲದೆ 'ವೇದಾಂತ ತತ್ತ್ವ'ವನ್ನು ಕುರಿತು ಬರೆದ ಗ್ರಂಥಗಳು — ಎಲ್ಲವೂ ಸೇರುತ್ತವೆ. 'ವೇದಾಂತ'ವೆಂಬುದು 'ವೇದ'ಗಳ ಒಂದು ಭಾಗ; ಒಂದರ್ಥದಲ್ಲಿ ಅಲೌಕಿಕ ಜ್ಞಾನ. ಅದು ತತ್ತ್ವವೂ ಹೌದು, ಧರ್ಮವೂ ಹೌದು. ಸ್ವಾಮಿ ವಿವೇಕಾನಂದರು ಹೇಳುವಂತೆ, ಭಾರತದಲ್ಲಿ ಉಳಿದಿರುವ ಪ್ರಾಯೋಗಿಕ ಧರ್ಮವೆಂದರೆ, ಅದು ವೇದಾಂತವೊಂದೇ.

### ವೇದಗಳ ಪ್ರಾಚೀನತೆ ಮತ್ತು ಅದರ 'ಅಪೌರುಷೇಯ' ಲಕ್ಷಣ

ವೇದಗಳು ಸನಾತನವಾದವುಗಳು; ಅವು ಎಂದೆಂದಿಗೂ ಇರುತ್ತವೆ; ಅವು ಆದಿ-ಅಂತ್ಯಗಳಿಲ್ಲದವು ಎಂದು ನಮ್ಮ ಪರಂಪರೆ ನಂಬುತ್ತದೆ. ಇದರರ್ಥ, ಗ್ರಂಥ ನಾಶವಾದರೂ, ಜನರೆಲ್ಲ ನಾಶವಾದರೂ ವೇದ ಉಳಿಯುವುದು — ಮತ್ತೆ ಇನ್ನೊಂದು ಬಾರಿ ಅದು ವ್ಯಕ್ತಗೊಳ್ಳುವುದು. ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ: ''ವೇದಗಳೆಂದು ಕರೆಯಲ್ಪಡುವ, ಅನಾದಿಯೂ ಅನಂತವೂ ಆದ ಇಂದ್ರಿಯಾತೀತ ಸತ್ಯಗಳು ಅನವರತವೂ ಅಸ್ತಿತ್ವದಲ್ಲಿವೆ. ಈ ಸತ್ಯಗಳ ಸಹಾಯದಿಂದಲೇ ಸ್ವಯಂ ಸೃಷ್ಟಿಕರ್ತನು ಜಗತ್ತಿನ

ಸೃಷ್ಟಿ, ಸ್ಥಿತಿ, ಪ್ರಳಯ ಕಾರ್ಯಗಳನ್ನು ನಡೆಸುತ್ತಿದ್ದಾನೆ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೫, ಪು. ೩೮೩)*

ಆದರೆ ಅನೇಕ ಮಂದಿ ಪಾಶ್ಚಾತ್ಯ ವಿದ್ವಾಂಸರು ಹಾಗೂ ಇಲ್ಲಿನ ಆಧುನಿಕ ವಿದ್ವಾಂಸರು ವೇದಗಳ ಕಾಲವನ್ನು ನಿಶ್ಚಯಿಸುವ ಪ್ರಯತ್ನ ಮಾಡಿ, ಕಿ.ಪೂ. ೧೫೦೦ ಸುಮಾರಿಗೆ ವೇದಗಳ ಕಾಲ ವೆಂದೂ, ಇನ್ನು ಕೆಲವರು ೮೦೦೦ ವರ್ಷಗಳಿಗೂ ಹಿಂದೆ ಎಂದೂ, ಮತ್ತೆ ಕೆಲವರು ೨೫,೦೦೦ ವರ್ಷಗಳಿಗೂ ಪ್ರಾಚೀನವೆಂದೂ ಚರ್ಚೆ ನಡೆಸಿದ್ದಾರೆ. ವೇದಗಳು ಎಂದರೆ ಕೇವಲ ಭಾಷಾರೂಪ ದಲ್ಲಿರುವ ಸಾಹಿತ್ಯವಲ್ಲ ; ಅಲೌಕಿಕ ಸತ್ಯಗಳನ್ನು ಹೇಳುವ ಜ್ಞಾನ ಎಂದು ಅರ್ಥೈಸದೆ ಇದ್ದುದರಿಂದ ಉಂಟಾಗಿರುವ ಗೊಂದಲ ವಿದು. ವೇದಗಳು ಪುರುಷನಿರ್ಮಿತವಲ್ಲ, ಅವುಗಳು ಪರಬ್ರಹ್ಮನ ನಿಃಶ್ವಾಸ ಎಂದು ವೇದಗಳಲ್ಲೇ ವರ್ಣಿತವಾಗಿದೆ. ಈ ಅಪೌರು ಷೇಯ (ಪುರುಷನಿರ್ಮಿತವಲ್ಲದೆ, ದೈವೀಮೂಲದಿಂದಲೇ ವ್ಯಕ್ತ ವಾದುದು) ಲಕ್ಷಣದಿಂದಾಗಿಯೇ, ವೇದಗಳ ಪ್ರಾಚೀನತೆಯನ್ನು ಹುಡುಕಹೊರಡುವುದು ಅಸಂಗತವೆನಿಸುತ್ತದೆ. ಅದಕ್ಕೆ ಬದ ಲಾಗಿ, ವೇದಗಳು ಸಾರುವ ಲೋಕೋತ್ತರ ತತ್ತ್ವಗಳೆಡೆಗೆ ನಮ್ಮ ಗಮನ ಹರಿಸಬೇಕು. ಅದರಿಂದ ವೇದಗಳ ಲೋಕಾತೀತ ನೆಲೆಯ ಬೆಳಕು ಕಿಂಚಿತ್ತಾದರೂ ಅರ್ಥವಾಗಬಹುದು.

### ಆಧ್ಯಾತ್ಮಿಕತೆಯ ಬೆಳವಣಿಗೆ ಮತ್ತು ಅನುಭೂತಿ

ಹೀಗಿದ್ದರೂ, ವೇದ-ವೇದಾಂತಗಳಲ್ಲಿ ಕಂಡುಬರುವ ಆಧ್ಯಾ ತ್ಮಿಕ ಭಾವನೆಯ ವಿಕಾಸವನ್ನು ಗಮನಿಸಿದೆ ಇರಲು ಸಾಧ್ಯವಿಲ್ಲ. ಸಂಹಿತಾ ಭಾಗಗಳಲ್ಲಿ ಕಂಡುಬರುವ ಇಂದ್ರ, ಅಗ್ನಿ, ವರುಣ, ವಾಯು ಮುಂತಾದ ಪ್ರಕೃತಿ ದೇವತೆಗಳು ಮುಂದೆ ಪುರುಷ, ಆತ್ಮ, ಬ್ರಹ್ಮ ಮುಂತಾದ ತತ್ತ್ವಗಳಾಗಿ ಮಾರ್ಪಾಡುವುದನ್ನು ನಾವು ಕಾಣುತ್ತೇವೆ. ಪ್ರಾಚೀನ ಋಷಿಗಳ ಆಧ್ಯಾತ್ಮಿಕ ಅನ್ವೇಷಣೆ ಮೊದಲು ಬಹಿರ್ಮುಖವಾಗಿ ನಡೆಯಿತು; ಕಾಲಾಂತರದಲ್ಲಿ ಅದು ಅಂತರ್ಮುಖವಾಯಿತು. ಎಲ್ಲ ಜೀವಿಗಳ ಅಂತರಾತ್ಮನಾಗಿ ರುವ ಆ ಮಹಿಮಾನ್ವಿತ ಪುರುಷನನ್ನು 'ಆತ್ಮ' (ಅಂದರೆ 'ನಾನು' ಎಂಬ ಅರ್ಥವೂ ಆಗುತ್ತದೆ) ಎಂದೇ ಕರೆದರು. ಅದು ಎಲ್ಲವನ್ನೂ ಮೀರಿದ, ಮೀರಿಸುವ ಅವಸ್ಥೆ; ಆ ಸತ್ಯವನ್ನು ಎಲ್ಲಕ್ಕಿಂತಲೂ ದೊಡ್ಡದು ಎಂಬ ಅರ್ಥದಲ್ಲಿ 'ಬ್ರಹ್ಮ' ಎಂದೂ ಕರೆದರು. ಇದು ಕೇವಲ ಕಲ್ಪನೆಯಲ್ಲ; ಆಂತರಿಕ ಶೋಧದಿಂದ ಉನ್ನತಿಗೇರಿದ ಮನಸ್ಸಿಗೆ ಗೋಚರವಾದ ದಿವ್ಯಾನುಭವ. ಅಂಥ ಅನುಭೂತಿಯ ವರ್ಣನೆ ಉಪನಿಷತ್ತುಗಳಲ್ಲಿ ಕಂಡುಬರುತ್ತದೆ: '**ವೇದಾಹಮೇತಂ ಪುರುಷಂ ಮಹಾಂತಂ। ಆದಿತ್ಯವರ್ಣಂ ತಮಸಃ ಪರಸ್ತಾತ್। ತಮೇವ ವಿದಿತ್ವಾ ಅತಿಮೃತ್ಯುಮೇತಿ। ನಾನ್ಯಃ ಪಂಥಾ ವಿದ್ಯ ತೇಽಯ ನಾಯ ॥**' *(ಶ್ವೇತಾಶ್ವತರೋಪನಿಷತ್, ३.೮)* (ಅಜ್ಞಾನ ವೆಂಬ ಅಂಧಕಾರಕ್ಕಿಂತ ಆಚೆಗಿರುವ ಪ್ರಕಾಶ ಸ್ವರೂಪನಾದ, ಮಹಾನ್ ಆದ ಈ ಪುರುಷನನ್ನು ನಾನು ಅರಿತಿರುತ್ತೇನೆ. ಅವ ನನ್ನು ಅರಿತುಕೊಂಡ ಮನುಷ್ಯನು ಮೃತ್ಯುವನ್ನು ದಾಟುತ್ತಾನೆ. ಪರಮಪದ ಪ್ರಾಪ್ತಿಗೆ ಇದಕ್ಕಿಂತ ಬೇರೆ ದಾರಿಯಿಲ್ಲ.)

ತಾವು ಕಂಡುಕೊಂಡ, ಅನುಭವಿಸಿದ ಸತ್ಯವನ್ನು ಹಿಂದಿನ ಋಷಿಗಳು ಕೇವಲ ತಮ್ಮಲ್ಲೇ ಇಟ್ಟುಕೊಂಡು ಆನಂದಿಸಬಯಸ ಲಿಲ್ಲ. ಇತರರೂ ಈ ಸತ್ಯಗಳನ್ನು ಕಾಣಲಿ, ಅದಕ್ಕೆ ತಮ್ಮಿಂದಾಗುವ ಎಲ್ಲ ಸಹಾಯವನ್ನು ಮಾಡುತ್ತೇವೆ - ಎನ್ನುವ ಮನೋಭಾವ ಅವರದು. ಅದಕ್ಕಾಗಿಯೇ ಅವರು ಆತ್ಮಸಾಕ್ಷಾತ್ಕಾರ ಹೊಂದುವ ಮಾರ್ಗವನ್ನೂ ವೇದಗಳಲ್ಲಿ ತೋರಿಸಿಕೊಟ್ಟರು. ಹೀಗೆ ವೇದಗಳು ಅತ್ಯುನ್ನತ ಜ್ಞಾನವಷ್ಟೇ ಅಲ್ಲ ; ಅದನ್ನು ಹೊಂದುವ ಬಗೆಯನ್ನು ತಿಳಿಸಿಕೊಡುವ ಮಾರ್ಗವೂ ಆಗಿದೆ.

### ವೈದಿಕ ಪರಂಪರೆಯ ಮಹತ್ವ

ವೇದ, ವೇದಾಂತಗಳೆಂದರೆ ಬರಿಯ ಗ್ರಂಥಗಳಲ್ಲ ; ಭಾಷೆಯ ಮೂಲಕ ವಿವರಿಸುವ ಲೌಕಿಕ ಜ್ಞಾನವೂ ಅಲ್ಲ. ಅವುಗಳು ಅಲೌ ಕಿಕವೂ ಸಾರ್ವತ್ರಿಕವೂ ಆದ ಸತ್ಯವನ್ನು ತನ್ನಲ್ಲಿ ಅಡಕಗೊಳಿಸಿರುವ ದಿವ್ಯ ವಿದ್ಯೆಯೇ ಆಗಿವೆ. ಈ ವಿದ್ಯೆ ಭಾಷೆಯ ಮೂಲಕ ವ್ಯಕ್ತ ಗೊಂಡಾಗ ವಿಸ್ತಾರವಾದ ಸಾಹಿತ್ಯದ ರೂಪವನ್ನು ಪಡೆಯಿತು. ಈ ವಿದ್ಯೆಯನ್ನು ಅರಿತವರ ಹಾಗೂ ಅದನ್ನರಿಯುವುದೇ ಜೀವ ನದ ಪ್ರಮುಖ ಕರ್ತವ್ಯ ಎಂದು ಭಾವಿಸಿದವರ ಜೀವನ, ಆಧ್ಯಾ ತ್ಮಿಕ ಜೀವನವಾಗಿ ಮಾರ್ಪಟ್ಟಿತು. ಇಂತಹ 'ವೈದಿಕ'ರ ಪರಂ ಪರೆಯೇ ನಮ್ಮಲ್ಲಿ ಬೆಳೆದು ಬಂತು. ಸಹಸ್ರಾರು ವರ್ಷಗಳ ಹಿಂದಿನ ವೇದವಾಙ್ಮಯವು ಸ್ವಲ್ಪವೂ ಪಾಠಾಂತರವಿಲ್ಲದೆ ಇಂದಿನ ವರೆಗೂ ಮುಂದುವರಿದುಕೊಂಡು ಬರಲು ಅಗತ್ಯವಾದ ವ್ಯಾಕ ರಣ, ಛಂದಸ್ಸು, ಶಿಕ್ಷಾ ಮೊದಲಾದ ವೇದಾಂಗಗಳೂ ಈ ಪರಂಪ ರಾಗತ ವಿದ್ಯೆಯ ಅಂಗಗಳಾದವು. ಆಧುನಿಕ ಕಾಲಘಟ್ಟದಲ್ಲಿ ಮುದ್ರಣ, ಧ್ವನಿಸುರುಳಿ, ಗಣಕಯಂತ್ರವೇ ಮೊದಲಾದ ಮಾಧ್ಯಮಗಳ ಮೂಲಕ ವೇದ ಸಂಹಿತೆಗಳನ್ನು ಸಂರಕ್ಷಿಸಿ ಇಡುವ ಕಾರ್ಯ ಸ್ತುತ್ಯಾರ್ಹವಾದ ರೀತಿಯಲ್ಲಿ ನಡೆಯುತ್ತಿದೆ; ಆದರೆ ಇದರಿಂದ ವೈದಿಕ ಪರಂಪರೆಯ ನಿಜವಾದ ಮಹತ್ವವನ್ನು ನಾವು ಮನಗಂಡಂತೆ ಆದೀತೆ? ವೇದಗಳು ಸಾರುವ ಸಾರ್ವಕಾಲಿಕ ಸತ್ಯಗಳ ಸಾಕ್ಷಾತ್ಕಾರ ಸಾಧ್ಯವಾದೀತೆ?

ವೇದಗಳು ಎಂದರೆ ವಿದ್ಯೆ ಎಂಬುದನ್ನೂ, ಅದು ಸಾರುವ ತತ್ತ್ವ ಅಲೌಕಿಕವಾದದ್ದು ಎಂಬುದನ್ನೂ ಗಮನದಲ್ಲಿಟ್ಟುಕೊಂಡರೆ, ವೈದಿಕ ಪರಂಪರೆಯನ್ನು ಶ್ರದ್ಧೆ, ಭಕ್ತಿಗಳಿಂದ ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದು ಸಾಧ್ಯವೆಂಬುದು ಸ್ಪಷ್ಟವಾಗುತ್ತದೆ. ವೈದಿಕ ಜೀವನ, ವೇದಾಂತ ತತ್ತ್ವಗಳ ಅನುಸಂಧಾನ, ಇವುಗಳ ಮೂಲಕ ಪ್ರಾಚೀನ ಋಷಿಗಳು ಕಂಡುಕೊಂಡು ತತ್ತ್ವ-ದರ್ಶನಗಳನ್ನು ಸ್ವತಃ ನಾವು ಅನುಭವಿಸಿ ಜೀವನ ಸಾರ್ಥಕ ಮಾಡಿಕೊಳ್ಳುವುದ ರಲ್ಲೇ ನಮ್ಮ ನಿಜವಾದ ಕಾಳಜಿ ವ್ಯಕ್ತವಾಗಬೇಕು.

### ಭಾರತೀಯ ಸಮಾಜ ಮತ್ತು ವೇದ-ವೇದಾಂತ

ನಮ್ಮ ದೇಶದ ಸಾಂಸ್ಕೃತಿಕ ಪರಂಪರೆಯಲ್ಲಿ ಹಲವು ದರ್ಶನ, ಪಂಥ ಹಾಗೂ ಮತಗಳಿವೆ. ಶೈವ, ವೈಷ್ಣವ, ಶಾಕ್ತ, ದ್ವೈತ,

ಅದ್ವೈತ, ವಿಶಿಷ್ಟಾದ್ವೈತ — ಹೀಗೆ ಹತ್ತು ಹಲವು ಬಗೆಯ ಪರಂಪರೆಗಳು ಒಂದಲ್ಲ ಒಂದು ರೀತಿ ವೇದ-ವೇದಾಂತಗಳ ಪ್ರಮಾಣವನ್ನು ಅಂಗೀಕರಿಸಿವೆ. ಸಮಾಜದ ವಿವಿಧ ಕ್ಷೇತ್ರಗಳಲ್ಲಿ ನಿರತರಾಗಿದ್ದುಕೊಂಡು ಜೀವನ ನಡೆಸುವ ಜನರಲ್ಲಿ ವೈದಿಕ ಭಾವನೆಗಳು ನೇರವಾಗಿ ಅಥವಾ ಪರೋಕ್ಷವಾಗಿ ಹಾಸುಹೊಕ್ಕಾಗಿವೆ. ಪ್ರಪಂಚದ ಅನಿತ್ಯತೆ, ಜೀವನದ ನಶ್ವರತೆ, ಸ್ವಾರ್ಥಶೂನ್ಯ ಬದುಕು, ದ್ವಂದ್ವಗಳ ನಡುವೆ ಗಳಿಸಬೇಕಾದ ಸಮತೋಲನ, ಜಗತ್ತನ್ನು ಮೀರಿದ ಅಗೋಚರ ಶಕ್ತಿಯ ಮೇಲೆ ನಂಬಿಕೆ, ಕರ್ಮ ಹಾಗೂ ಕರ್ಮಫಲ, ಜನ್ಮಜನ್ಮಾಂತರಗಳಲ್ಲಿ ಜೀವಿಯ ಪ್ರಯಾಣ, ಭಗವಂತನ ಕೃಪೆ ಹಾಗೂ ಪ್ರಾರ್ಥನೆ - ಈ ಎಲ್ಲ ಭಾವನೆಗಳನ್ನು ಗ್ರಾಮೀಣ ಜನರೂ ಅರಿತು ಅನುಸರಿಸುತ್ತಾರೆ. ತತ್ತ್ವ ಹಾಗೂ ಧಾರ್ಮಿಕ ಆಚರಣೆಗಳು ಒಂದಾಗಿ ಬೆಸೆದ ಸನ್ನಿವೇಶವನ್ನು ಇಂದಿಗೂ ನಮ್ಮ ಸಮಾಜದಲ್ಲಿ ಕಾಣಬಹುದು. ಇವುಗಳ ಹಿಂದಿರುವ ಅಂತಃಸ್ರೋತವು ವೈದಿಕ ಪರಂಪರೆಯದೇ ಆಗಿದೆ ಎಂಬುದು ಇಲ್ಲಿ ಮುಖ್ಯ.

### ಆಧುನಿಕ ಸನ್ನಿವೇಶದಲ್ಲಿ

ಪ್ರಾಚೀನ ವೈದಿಕ ಪರಂಪರೆ ಎಷ್ಟೇ ಶ್ರೇಷ್ಠವಾಗಿರಲಿ, ಇಂದಿನ ಜೀವನಕ್ಕೆ ಅದೆಷ್ಟು ಪ್ರಸ್ತುತ? ಈ ಪ್ರಶ್ನೆ ಅಸಹಜವಲ್ಲ. ಮೇಲ್ನೋಟಕ್ಕೆ ಪ್ರಪಂಚ ಬದಲಾಗಿದೆ. ಯಂತ್ರಜಗತ್ತು ದೈನಂದಿನ ಜೀವನವನ್ನು ಆಳುತ್ತಿದೆ. ಕಂಪ್ಯೂಟರ್, ಮೊಬೈಲ್, ಇಂಟರ್‌ನೆಟ್‌ಗಳ ಗದ್ದಲದಲ್ಲಿ ಮಾನವ ಗಲಿಬಿಲಿಗೊಂಡಿದ್ದಾನೆ. ವ್ಯಾಪಾರೀಕರಣ, ಸಾಂಸ್ಕೃತಿಕ ಮಿಶ್ರಣ, ವೈಜ್ಞಾನಿಕ ಪ್ರಗತಿ ಇವುಗಳ ನಡುವೆ ವೈದಿಕ ಪರಂಪರೆ ಎಲ್ಲಿ ಕಣ್ಣಿಗೆ ಬೀಳುವುದು?

ಆದರೆ ಈ ಬದಲಾವಣೆಗಳ ಹಿಂದೆ ಮಾನವನ ನಿತ್ಯರೋದನ ಕೇಳಿಸದಾಗಿದೆ. ಅನಾದಿ ಕಾಲದಿಂದ ಮಾನವನ ಹೃದಯದೊಳಗೆ ಮನೆ ಮಾಡಿರುವ ಅದೇ ದುಃಖ, ಸಮಸ್ಯೆ, ಸಾವು, ಸಂಘರ್ಷಗಳ ಮೊರೆ ಮರೆಯಾಗಿ ಹೋದಂತಿದೆ. ಎಲ್ಲ ಭರಭರಾಟೆಯ ಹಿಂದೆ ಅಡಗಿರುವ ಈ ವ್ಯಥೆ ಅದೆಷ್ಟು ಕಾಲ ಹೊಗೆಯಾಡುತ್ತ ಉಳಿಯುವುದು? ತನ್ನೆಲ್ಲ ನೋವು, ದುಗುಡಗಳ ಲಾವಾರಸ ಎಂದೋ ಒಮ್ಮೆ ಸ್ಫೋಟಗೊಳ್ಳುವುದು, ಉಕ್ಕಿ ಹರಿಯುವುದು. ಅದರ ಬೇಗೆಯನ್ನು ತಣಿಸಬಲ್ಲ ಶಾಂತ ವಾರಿಧಿ ಎಲ್ಲಿ ಕಾಣಿಸಬಹುದು? ಅದು ಇಲ್ಲಿ ಮಾತ್ರ— ಎಲ್ಲಿ ಶಾಶ್ವತ ಆನಂದದ, ಶಾಂತಿ, ಪಾವಿತ್ರ್ಯ ಹಾಗೂ ಧನ್ಯತೆಯ ಧ್ವನಿ ಮೂಡುವುದೋ ಅಂಥ ವೇದ-ವೇದಾಂತದ ಆದರ್ಶಗಳಲ್ಲಿ ಮಾತ್ರ. ಮಾನವ ಬಾಹ್ಯಜಗತ್ತಿನಲ್ಲಿ ಮಾತ್ರ ಆಧುನಿಕನಾದರೆ ಸಾಕೆ? ಅವನ ಅಂತರಂಗ ಹದವಾಗುವ ಆಧುನಿಕತೆ ಬರುವುದೆಂದು? 

### ಅಕ್ಟೋಬರ್ ತಿಂಗಳ ಕಾರ್ಯಕ್ರಮಗಳು

| | | |
|---|---|---|
| ೩ ಬುಧವಾರ | | ಸ್ವಾಮಿ ಅಭೇದಾನಂದ ಜಯಂತಿ |
| ೫ ಶುಕ್ರವಾರ | | ಏಕಾದಶಿ |
| ೯ ಮಂಗಳವಾರ | | ಸ್ವಾಮಿ ಅಖಂಡಾನಂದ ಜಯಂತಿ |
| ೧೬ ಮಂಗಳವಾರ | | ಶ್ರೀ ದುರ್ಗಾಪೂಜಾ ಮಹಾಸಪ್ತಮಿ |
| ೧೭ ಬುಧವಾರ | | ಶ್ರೀ ದುರ್ಗಾಪೂಜಾ ಮಹಾಷ್ಟಮಿ |
| ೧೮ ಗುರುವಾರ | | ಶ್ರೀ ದುರ್ಗಾಪೂಜಾ ಮಹಾನವಮಿ |
| ೧೯ ಶುಕ್ರವಾರ | | ವಿಜಯದಶಮಿ/ಶ್ರೀ ಮಧ್ವ ಜಯಂತಿ |
| ೨೦ ಶನಿವಾರ | | ಏಕಾದಶಿ |

## ಲಕ್ಷ್ಮಿಯ ಆವಿರ್ಭಾವ



''ಭಗವಂತ ವೈಕುಂಠದಿಂದ ಭಕ್ತನು ಕರೆಯುವಲ್ಲಿಗೆ ಇಳಿದು ಬರುತ್ತಾನೆ. ಕೋಜಾಗರಿ ಹುಣ್ಣಿಮೆಯ ದಿನ (ಅಶ್ವಿನಿ-ಕಾರ್ತಿಕ ಮಾಸದಲ್ಲಿ) ಬರುವ ಹುಣ್ಣಿಮೆ) ವೈಕುಂಠದಿಂದ ಲಕ್ಷ್ಮಿ ಭೂಮಿಗಿಳಿದು ಬರುತ್ತಾಳೆ. ಎಲ್ಲೆಲ್ಲಿ ಅವಳ ದೃಷ್ಟಿ ಬೀಳುವುದೋ, ಅಲ್ಲಿಗೆಲ್ಲ ಅವಳು ಹೋಗುವಳು, ಅಲ್ಲೆಲ್ಲ ಪೂಜೆಯನ್ನು ಸ್ವೀಕರಿಸುವಳು. ನನ್ನ ಅತ್ತೆಗೆ ಕಾಮಾರಪುಕುರದಲ್ಲಿ ಹದಿನೈದು-ಹದಿನಾರು ವರ್ಷದ ಗೌರವರ್ಣದ ಹುಡುಗಿಯೊಬ್ಬಳು ಕಾಣಿಸಿಕೊಂಡಿದ್ದಳು. ಕಿವಿಗಳಲ್ಲಿ ಶಂಖದ ಕುಂಡಲಗಳನ್ನು ಧರಿಸಿದ್ದಳು, ಕೈಯಲ್ಲಿ ವಜ್ರದ ಬಳೆಗಳಿದ್ದವು. ಶ್ರೀರಾಮಕೃಷ್ಣರ ಮನೆಯ ಮುಂದಿನ ಬಕುಲವೃಕ್ಷದ ಕೆಳಗೆ ನಿಂತು ಅವಳು ಅವರೊಂದಿಗೆ ಮಾತನಾಡಿದಳು. ನನ್ನ ಅತ್ತೆ, ''ನೀನು ಯಾರಮ್ಮಾ?'' ಎಂದು ಕೇಳಿದರು. ಅದಕ್ಕೆ ಲಕ್ಷ್ಮಿ, ''ಇಲ್ಲಿಗೆ ಎಂದೇ ನಾನು ಬಂದಿದ್ದೇನೆ'' ಎಂದಳು. ಅದಕ್ಕೆ ನನ್ನ ಅತ್ತೆ, ''ನನ್ನ ಮಗ (ರಾಮ ಕುಮಾರ) ನನ್ನು ನೋಡಿದ್ದೀಯಾ ? ಅವನು ಪೂಜೆ ಮಾಡಲು ಹೋದವನು ಇನ್ನೂ ಬರಲಿಲ್ಲ, ಹೊತ್ತು ರಾತ್ರಿಯಾಗಿದೆ'' ಎಂದರು. ಆಗ ಲಕ್ಷ್ಮಿ, ''ಹೌದಮ್ಮಾ, ಅವನು ಬರುತ್ತಿದ್ದಾನೆ; ಅಕ್ಕಿ, ಬಾಳೆಹಣ್ಣು ಇತ್ಯಾದಿಗಳನ್ನು ಕಟ್ಟಿಕೊಂಡು ಬರುತ್ತಿದ್ದಾನೆ. ನಾನೂ ಅಲ್ಲಿಂದಲೇ ನಿಮ್ಮ ಮನೆಗೆ ಬರುತ್ತಿದ್ದೇನೆ'' ಎಂದಳು. ಅದಕ್ಕೆ ನಮ್ಮತ್ತೆ, ''ಬೇಡಮ್ಮಾ, ಈಗ ಮನೆಯಲ್ಲಿ ಯಾರೂ ಇಲ್ಲ, ಈಗ ಬರಬೇಡ'' ಎಂದರು. ಹೀಗೆ ಹಲವು ಬಾರಿ ಹೇಳಿದ ಬಳಿಕ, ''ಆಗಲಿ, ನನ್ನ ಸಾಮಾನ್ಯ ದೃಷ್ಟಿಯಂತೂ ನಿಮ್ಮ ಮೇಲೆ ಇದ್ದೇ ಇರುತ್ತದೆ'' ಎಂದು ಹೇಳಿ ಆ ದೇವಿ ಅಂತರ್ಧಾನಳಾದಳು. ನೋಡು, ಅದಕ್ಕಾಗಿಯೇ ಅವರ ಪರಿಸ್ಥಿತಿ ಅಷ್ಟೇನೂ ಉತ್ತಮವಾಗಲಿಲ್ಲ. ಆದರೆ ಅವರಿಗೆ ಹೊಟ್ಟೆ-ಬಟ್ಟೆಗೇನೂ ತೊಂದರೆಯಿಲ್ಲದಂತೆ ನಡೆಯುತ್ತಿದೆ ಅಷ್ಟೆ.

''ಲಕ್ಷ್ಮಿ ಲಾಹಾ ಮನೆಯ ದಿಕ್ಕಿನಿಂದ, ಅವರ ಧಾನ್ಯಗಳನ್ನು ಸಂಗ್ರಹಿಸುವ ಉಗ್ರಾಣದ ಕಡೆಯಿಂದ ತಮ್ಮ ಕಡೆಗೆ ಬಂದಿದ್ದನ್ನು ನನ್ನ ಅತ್ತೆ ಕಂಡಿದ್ದರು. ನನ್ನ ಭಾವ (ರಾಮಕುಮಾರ) ಅಲ್ಲಿಗೆ ಬಂದು ಇದನ್ನೆಲ್ಲ ಕೇಳಿ ಹೇಳಿದರು, ''ಅಮ್ಮಾ, ನಿನಗೆ ಗೊತ್ತಾಗಲಿಲ್ಲ, ಸ್ವಯಂ ಲಕ್ಷ್ಮಿಯೇ ಬಂದಿದ್ದಳು. ಇಂದು ಕೋಜಾಗರಿ ಹುಣ್ಣಿಮೆಯಲ್ಲವೆ?'' ಅವರಿಗೆ ಭವಿಷ್ಯ ಹೇಳಲು ಬರುತ್ತಿತ್ತು . ಇದನ್ನು ಅವರು ಜ್ಯೋತಿಷ್ಯ ನೋಡಿ ತಿಳಿದುಕೊಂಡಿದ್ದರು.''

'ಶ್ರೀಶಾರದಾದೇವಿ ವಚನವೇದ'ದಿಂದ *(ಪು.೧೬೬-೬೭)*

# ಬ್ರಹ್ಮಸತ್ಯಂ ಜಗನ್ಮಿಥ್ಯಾ



❁ ಭಕ್ತ : ''ಮಹಾಶಯರೆ, ಈ ಸಂಸಾರ ಮಿಥ್ಯೆಯಾದುದೇನು?''

ಶ್ರೀರಾಮಕೃಷ್ಣರು: ''ಹೌದು, ಭಗವಂತನ ಸಾಕ್ಷಾತ್ಕಾರವನ್ನು ಪಡೆಯದವರೆಗೆ ಈ ಜಗತ್ತು ಮಿಥ್ಯೆಯಾದುದೆ. ಅಜ್ಞಾನವಶದಿಂದ ಮನುಷ್ಯ ಭಗವಂತನನ್ನು ಮರೆತು 'ನನ್ನದು, ನನ್ನದು' ಅನ್ನುತ್ತಲೇ ಇರುತ್ತಾನೆ. ಮಾಯೆಯಿಂದ ಬದ್ಧನಾಗಿ, ಕಾಮಕಾಂಚನದಿಂದ ಮುಗ್ಧನಾಗಿ ಅಧೋಗತಿಗೆ ಇಳಿಯುತ್ತಲೇ ಇರುತ್ತಾನೆ. ಮಾಯೆಯ ದೆಸೆಯಿಂದ ಮನುಷ್ಯ ಅಂಥ ಅಜ್ಞಾನಿಯಾಗುತ್ತಾನೆ. ಈ ಸಂಸಾರದಿಂದ ಮುಕ್ತನಾಗಲು ದಾರಿಯಿದ್ದರೂ ಕೂಡ ಅದನ್ನು ಪತ್ತೆ ಮಾಡಲಾರದವನಾಗಿ ಬಿಡುತ್ತಾನೆ!

❁ ಈ ಜಗತ್ತು ಎಷ್ಟು ಅನಿತ್ಯವಾದ್ದು ಎಂಬುದನ್ನು ನೀವು ನಿಮ್ಮ ಸ್ವಂತ ಅನುಭವದಿಂದಲೇ ಅರಿತುಕೊಂಡಿದ್ದೀರಿ. ಈ ದೃಷ್ಟಿಯಿಂದ ಅದನ್ನು ನೋಡಿ. ಎಷ್ಟೊಂದು ಜನ ಈ ಜಗತ್ತಿನಲ್ಲಿ ಹುಟ್ಟಿ ಸತ್ತಿದ್ದಾರೆ! ಜನ ಹುಟ್ಟುತ್ತಾರೆ ಮತ್ತು ಸಾಯುತ್ತಾರೆ. ಈ ಜಗತ್ತು ಈಗಿದೆ, ಈಗಿಲ್ಲ. ಅನಿತ್ಯವಾದ್ದು. ಯಾರನ್ನು 'ನನ್ನವರು, ನನ್ನವರು' ಅನ್ನುತ್ತಿದ್ದೀರೊ, ನೀವು ಸಾಯುವಾಗ ಕಣ್ಣು ಮುಚ್ಚಿದೊಡನೆಯೆ ಯಾರೂ ಜೊತೆಯಲ್ಲಿ ಬರುವುದಿಲ್ಲ. ಕೆಲಕೆಲವರಿಗೆ ಹತ್ತಿರದ ಸಂಬಂಧಿಗಳು ಯಾರೂ ಇಲ್ಲದಿದ್ದರೂ, ಅವರು ತಮ್ಮ ಮೊಮ್ಮಕ್ಕಳ ಸಲುವಾಗಿ ಕಾಶಿಗೆ ಹೋಗಲಾಗುವುದಿಲ್ಲ. 'ನಮ್ಮ 'ಹಾರು'ವಿನ ಗತಿ ಏನಾಗಿಬಿಡುತ್ತದೊ ಬಳಿಕ?' ಅಂತ ವಾದಿಸುತ್ತಾರೆ. 'ಬಂದು ಹೋಗಲು ಮಾರ್ಗವಿದೆ. ಆದರೂ ಮೀನು ಬೋನಿನಿಂದ ತಪ್ಪಿಸಿಕೊಂಡು ಹೋಗದು.' ರೇಷ್ಮೆಹುಳು ತನ್ನನ್ನು ತಾನೇ ಬಂಧಿಸಿಕೊಂಡು, ತಾನಾಗಿಯೇ ಸಾಯುತ್ತದೆ. ಈ ರೀತಿಯ ಈ ಜಗತ್ತು ಮಿಥ್ಯೆಯಾದ್ದು, ಅನಿತ್ಯವಾದ್ದು.

❁ 'ನೀನು ನಿನ್ನದು' ಎಂಬ ಭಾವನೆಯೇ ಜ್ಞಾನ; 'ನಾನು, ನನ್ನದು' ಎಂಬುದೇ ಅಜ್ಞಾನ. ಜ್ಞಾನ ಈ ಭಾವನೆಯನ್ನು ತರುತ್ತದೆ: 'ಹೇ ಭಗವಂತ, ನೀನೇ ಕರ್ತ, ನಾನು ಅಕರ್ತ. ಹೇ ಭಗವಂತ, ಎಲ್ಲವೂ ನಿನಗೆ ಸೇರಿದವೆ. ದೇಹ, ಮನಸ್ಸು, ಗೃಹ, ಪರಿವಾರ, ಜೀವ, ಜಗತ್ತು ಎಲ್ಲವೂ ನಿನಗೆ ಸೇರಿದವೆ. ಯಾವುದೂ ನನಗೆ ಸೇರಿದುದಲ್ಲ.'

❁ ಎರಡು ದೃಷ್ಟಿಗಳಿವೆ-ಒಂದು ವೇದಾಂತದ್ದು, ಇನ್ನೊಂದು ಪುರಾಣದ್ದು. ವೇದಾಂತ ದೃಷ್ಟಿಯಿಂದ 'ಈ ಜಗತ್ತು ಮಾಯೆಯ ಚೌಕಟ್ಟಿನ ಮನೆ!' ಅಂದರೆ ಸ್ವಪ್ನದೋಪಾದಿಯಲ್ಲಿ ಮಿಥ್ಯೆಯಾದದ್ದು. ಆದರೆ ಪುರಾಣದೃಷ್ಟಿಯಿಂದ, ಭಕ್ತಿಶಾಸ್ತ್ರದ ದೃಷ್ಟಿಯಿಂದ, ಭಗವಂತನೇ ಚತುರ್ವಿಂಶತಿ ತತ್ತ್ವಗಳಾಗಿದ್ದಾನೆ. ಆತನನ್ನು ಒಳಗೂ ಹೊರಗೂ ಪೂಜೆಮಾಡಿ.

❁ ಭಗವಂತನ ಮಾಯೆಯಿಂದಲೇ ಈ ಜಗತ್ತು, ಈ ಸಂಸಾರ ಉದ್ಭವಿಸಿದೆ. ಮಹಾಮಾಯೆಯಲ್ಲಿ ವಿದ್ಯಾಮಾಯೆ, ಅವಿದ್ಯಾಮಾಯೆ ಎರಡೂ ಇವೆ. ವಿದ್ಯಾಮಾಯೆಯನ್ನು ಅವಲಂಬಿಸಿದರೆ, ಸಾಧುಸಂಗ, ಜ್ಞಾನ, ಭಕ್ತಿ, ಪ್ರೇಮ, ವೈರಾಗ್ಯ ಇವೆಲ್ಲಾ ಉಂಟಾಗುತ್ತದೆ. ಅವಿದ್ಯಾಮಾಯೆ ಎಂದರೆ ಪಂಚಭೂತಗಳು ಮತ್ತು ಪಂಚೇಂದ್ರಿಯಗಳ ವಸ್ತುಗಳು-ರೂಪ, ರಸ, ಗಂಧ, ಸ್ಪರ್ಶ, ಶಬ್ದ, ಇವು ಭಗವಂತನನ್ನು ಮರೆಸಿಬಿಡುತ್ತವೆ.

❁ ಭಕ್ತ: ''ಅವಿದ್ಯೆಯಿಂದ ಅಜ್ಞಾನವುಂಟಾಗುವುದಾದರೆ, ಯಾಕೆ ಭಗವಂತ ಅದನ್ನು ಸೃಷ್ಟಿಸಿದ?''

ಶ್ರೀರಾಮಕೃಷ್ಣರು: ''ಆತನ ಲೀಲೆ. ಕತ್ತಲೆ ಇಲ್ಲದೆ ಇತ್ತು ಎಂದರೆ ಬೆಳಕಿನ ಮಹಿಮೆಯನ್ನು ಅರಿಯಲಾಗುವುದಿಲ್ಲ. ದುಃಖ ಇಲ್ಲದೆ ಇತ್ತು ಎಂದರೆ ಸುಖ ಏನು ಎಂಬುದನ್ನು ಅರಿಯಲಾಗುವುದಿಲ್ಲ. ಕೆಟ್ಟದ್ದು ಏನು ಎಂಬುದರ ಅರಿವು ಇದ್ದರೆ ತಾನೆ ಒಳ್ಳೆಯದು ಏನು ಎಂಬುದರ ಅರಿವು ಆಗಬೇಕಾದರೆ.

''ಸಿಪ್ಪೆ ಇರುವುದರಿಂದ ತಾನೆ ಮಾವಿನಕಾಯಿ ಬೆಳೆಯುತ್ತದೆ, ಹಣ್ಣಾಗುತ್ತದೆ. ಮಾವಿನ ಕಾಯಿ ಪೂರ್ತಿ ಹಣ್ಣಾಗಿ ತಿನ್ನಲು ಸಿದ್ಧವಾಯಿತು ಎಂದರೆ ಆಗ ಸಿಪ್ಪೆಯನ್ನು ಬಿಸಾಡಿಬಿಡಬೇಕಾಗುತ್ತದೆ. ಮಾಯಾರೂಪದ ಸಿಪ್ಪೆ ಇರುವುದರಿಂದ ಕ್ರಮೇಣ ಬ್ರಹ್ಮಜ್ಞಾನ ಸಾಧ್ಯ. ಮಾವಿನಕಾಯಿ ಸಿಪ್ಪೆಯ ಹಾಗೆ. ವಿದ್ಯಾಮಾಯೆ, ಅವಿದ್ಯಾಮಾಯೆ ಎರಡೂ ಆವಶ್ಯಕ.''

❁ ವೇದಾಂತವಾದಿಗಳು ಹೇಳುತ್ತಾರೆ, 'ಸೋಽಹಮ್', ಎಂದರೆ 'ನಾನೇ ಭಗವಂತ.' ಬ್ರಹ್ಮ ಸತ್ಯಂ, ಜಗನ್ಮಿಥ್ಯಾ. 'ನಾನು' ಎಂಬುದೂ ಮಿಥ್ಯಾ. ಕೇವಲ ಆ ಪರಬ್ರಹ್ಮ ಮಾತ್ರ ಸತ್ಯ.

ಆದರೆ 'ಅಹಂ' ಎಂಬುದು ಹೋಗುವುದಿಲ್ಲವಾದ್ದರಿಂದ, 'ನಾನು ಭಗವಂತನ ದಾಸ, ಭಗವಂತನ ಪುತ್ರ, ಭಗವಂತನ ಭಕ್ತ' ಎಂಬ ಭಾವ ಬಹಳ ಒಳ್ಳೆಯದು.

❁ ಜ್ಞಾನಯೋಗಿ ಜ್ಞಾನಮಾರ್ಗನಿಷ್ಠನಾಗಿ ಸರ್ವದಾ 'ನೇತಿ, ನೇತಿ' ಎಂಬ ವಿಚಾರದಲ್ಲಿ, ಅಂದರೆ 'ಬ್ರಹ್ಮ ಇದಲ್ಲ, ಅದಲ್ಲ, ಜೀವವಲ್ಲ, ಜಗತ್ತಲ್ಲ' ಎಂಬ ವಿಚಾರದಲ್ಲಿ ತೊಡಗಿರುತ್ತಾನೆ. ಈ ರೀತಿಯಾಗಿ ವಿಚಾರ ಮಾಡುತ್ತ ಮಾಡುತ್ತ ಮುಂದುವರಿದರೆ ಮನಸ್ಸು ಸ್ಥಿರವಾಗುತ್ತದೆ. ಬಳಿಕ ಮನಸ್ಸು ಲಯ ಹೊಂದುತ್ತದೆ, ಸಮಾಧಿಯುಂಟಾಗುತ್ತದೆ; ಆಗ ಬ್ರಹ್ಮಜ್ಞಾನ ದೊರೆಯುತ್ತದೆ.

ಶ್ರೀರಾಮಕೃಷ್ಣ ವಚನವೇದದಿಂದ

# ಸ್ವಾಮಿ ವಿವೇಕಾನಂದರ ಯುವ ದಿನಗಳು

ಬಜೇಂದ್ರನಾಥ್ ಸೀಲ್

*ಅನುವಾದ: ಸ್ವಾಮಿ ನಿತ್ಯಸ್ಥಾನಂದ*



*ಸ್ವಾಮಿ ವಿವೇಕಾನಂದರ ಸ್ಮೃತಿ ಚಿತ್ರಗಳ ಸಂಕಲನ ಗ್ರಂಥ 'The Reminiscences of Swami Vivekananda ' ಇದರ ಹೊಸ ಆವೃತ್ತಿಯಲ್ಲಿ (೨೦೧೮) ಸೇರ್ಪಡೆಗೊಂಡಿರುವ ಲೇಖನದ ಅನುವಾದ ವಿದು. ಲೇಖಕರು ಪ್ರಸಿದ್ಧ ತತ್ತ್ವಜ್ಞಾನಿಗಳು; ಬ್ರಾಹ್ಮೋ ಚಳವಳಿಯ ನೇತಾರರು. ಅವರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಗಮನಾರ್ಹ ಸೇವೆ ಸಲ್ಲಿಸಿದ್ದರು. ಈ ಲೇಖನದಲ್ಲಿ ಸ್ವಾಮೀಜಿಯವರ ವಿದ್ಯಾರ್ಥಿ ಜೀವನದ ಹಲವು ವಿಶಿಷ್ಟ ಮಾಹಿತಿಗಳು ಉಲ್ಲೇಖಗೊಂಡಿವೆ. ಅನುವಾದಕರು ಈ 'ವಿವೇಕ ಪ್ರಭ'ದ ಪ್ರಥಮ ಸಂಪಾದಕರಾಗಿದ್ದವರು; ಪ್ರಸ್ತುತ ದಾವಣಗೆರೆ ಮಿಷನ್ ಆಶ್ರಮದ ಅಧ್ಯಕ್ಷರಾಗಿದ್ದಾರೆ.*

**ನಾ**ನು ಮೊದಲು ವಿವೇಕಾನಂದರನ್ನು ಭೇಟಿಯಾದದ್ದು ೧೮೮೧ರಲ್ಲಿ. ಜನರಲ್ ಅಸೆಂಬ್ಲಿಯ ಕಾಲೇಜಿನಲ್ಲಿ ನಾವಿಬ್ಬರೂ ವಿದ್ಯಾರ್ಥಿಗಳಾಗಿದ್ದೆವು ಮತ್ತು ಕಾಲೇಜಿನ ಪ್ರಾಂಶುಪಾಲರು ವಿದ್ವಾಂಸರೂ, ತತ್ತ್ವಜ್ಞಾನಿಗಳೂ ಕವಿಗಳೂ ಆದ ವಿಲಿಯಂ ಹೇಸ್ಟಿ. ವಯಸ್ಸಿನಲ್ಲಿ ಅವರು(ವಿವೇಕಾನಂದರು) ನನಗಿಂತ ಹಿರಿಯರು, ಆದರೆ ನಾನು ಕಾಲೇಜಿನಲ್ಲಿ ಒಂದು ವರ್ಷ ಹಿರಿಯವನಾಗಿದ್ದೆ. ಅವರೊಬ್ಬರು ಪ್ರತಿಭಾನ್ವಿತ ಯುವಕ ಎನ್ನುವುದನ್ನು ಅಲ್ಲಗೆಳೆಯುವಂತೆಯೇ ಇಲ್ಲ. ಎಲ್ಲರೊಡನೆ ಮುಕ್ತವಾಗಿ ಬೆರೆಯಬಲ್ಲ ವ್ಯಕ್ತಿ. ನಡೆನುಡಿಗಳಲ್ಲಿ ರೂಢಿಬದ್ಧರಾಗಿರಲಿಲ್ಲ. ಮಧುರವಾಗಿ ಹಾಡುತ್ತಿದ್ದರು. ಸ್ನೇಹಿತರ ನಡುವೆ ಯಾವಾಗಲೂ ಕೇಂದ್ರವ್ಯಕ್ತಿಯಾಗಿರುತ್ತಿದ್ದರು. ಸಂಭಾಷಣೆಯಲ್ಲಿ ಮಿಂಚುಹೊಳೆದಂತೆ ಮಾತನಾಡುತ್ತಿದ್ದರು. ಸ್ವಲ್ಪಮಟ್ಟಿಗೆ ಕಟು ವಿಮರ್ಶಕರೂ ಕೂಡ. ಪ್ರಪಂಚದ ತೋರಿಕೆಯ ಹಾಸ್ಯಾಸ್ಪದ ರೀತಿನೀತಿಗಳನ್ನು ತುಂಬ ಹಾಸ್ಯಮಯವಾಗಿ ಲೇವಡಿ ಮಾಡುತ್ತಿದ್ದರು. ಈ ಎಲ್ಲ ಸಂಶಯಾತ್ಮಕ ದೃಷ್ಟಿಯ ಹಿಂದೆ ಮೃದುಹೃದಯ ಅಡಗಿಕೊಂಡಿತ್ತು. ತುಂಬ ಅಸಾಂಪ್ರದಾಯಿಕರೂ ವೈಚಾರಿಕರೂ ಆಗಿದ್ದರು. ಅಸಾಂಪ್ರದಾಯಿಕರಲ್ಲಿ ಸಾಮಾನ್ಯವಾಗಿ ಕಂಡುಬರದ ಉಕ್ಕಿನ ಇಚ್ಛಾ ಶಕ್ತಿ ಅವರಲ್ಲಿತ್ತು. ತುಂಬ ದೃಢತೆಯಿಂದ ಪ್ರಭುತ್ವಪೂರ್ಣವಾಗಿ ಅವರು ಮಾತನಾಡು ತ್ತಿದ್ದರು. ಅವರ ಕಣ್ಣಿನಲ್ಲಿ ಏನೋ ಒಂದು ವಿಶಿಷ್ಟ ಶಕ್ತಿಯಿತ್ತು, ಅದು ಕೇಳುಗರನ್ನು ಮಂತ್ರಮುಗ್ಧರನ್ನಾಗಿಸುತ್ತಿತ್ತು.

ಇದು ಎಲ್ಲರಿಗೂ ವೇದ್ಯವಾಗುವ ವಿಷಯ. ಆದರೆ ಎಲ್ಲರ ಗಮನಕ್ಕೆ ಬರದ ಒಂದು ಅಂಶ ಅವರಲ್ಲಿತ್ತು — ಅದು ಅವರ ಆಂತರಿಕ ಹೋರಾಟ. ಆ ತೀವ್ರ ಆಂತರಿಕ ತುಡಿತ ಅವರನ್ನು ಚಡಪಡಿಸುವಂತೆ ಮಾಡುತ್ತಿತ್ತು, ಸುಮ್ಮನಿರಲು ಬಿಡುತ್ತಿರಲಿಲ್ಲ.

ಇದು ಅವರ ಮಾನಸಿಕ ಇತಿಹಾಸದ ಸಂದಿಗ್ಧ ಸಮಯದ ಪ್ರಾರಂಭಾವಸ್ಥೆ. ಈ ಅವಧಿಯಲ್ಲಿ ಅವರ ಸ್ವಪ್ರಜ್ಞೆ ಜಾಗೃತವಾಗಿ ಅವರು ತಮ್ಮ ಭವಿಷ್ಯ ವ್ಯಕ್ತಿತ್ವಕ್ಕೆ ತಳಹದಿ ಹಾಕಿದರು. ಜಾನ್ ಸ್ಟುವರ್ಟ್ ಮಿಲ್‌ರವರ 'ಧರ್ಮದ ಮೇಲಿನ ಮೂರು ಪ್ರಬಂಧಗಳ'ನ್ನು ('Three Essays on Religion') ಅವರು ಓದಿದಾಗ ಅವರ ಹಳೆಯ ನಂಬಿಕೆ ಬುಡಮೇಲಾಯಿತು. ಜಗತ್ತು ಭಗವಂತನ ಸೃಷ್ಟಿ ಎಂಬ ವಾದವು ಅವರ ಪಾಲಿಗೆ ಯುಕ್ತಿಯುಕ್ತತೆಯನ್ನು ಕಳೆದುಕೊಂಡಿತು. ಜಗತ್ತಿನಲ್ಲಿರುವ ಕೆಡುಕಿನ ಸಮಸ್ಯೆ

ಅವರನ್ನೀಗ ಕಾಡತೊಡಗಿತು. ಸರ್ವಜ್ಞನೂ ದಯಾಮಯನೂ ಆದ ಭಗವಂತನ ಸೃಷ್ಟಿಯಲ್ಲಿ ದುಃಖ-ಕೆಡಕುಗಳಿಗೆ ಎಡೆಯೆಲ್ಲಿ ಎಂಬ ಪ್ರಶ್ನೆ ಬೃಹದಾಕಾರವಾಗಿ ಅವರ ಮುಂದೆ ನಿಂತಿತು. ಇದೇ ಸಂದರ್ಭದಲ್ಲಿ ಸ್ನೇಹಿತನೊಬ್ಬನು ಹ್ಯೂಮ್‌ರ ಸಂಶಯವಾದ ವನ್ನೂ (Scepticism) ಮತ್ತು ಹರ್ಬರ್ಟ್ ಸ್ಪೆನ್ಸರ್ ಅವರ ಅಜ್ಞೇಯತಾವಾದವನ್ನೂ ಅಧ್ಯಯನ ಮಾಡಲು ಸೂಚಿಸಿದನು. ಈ ಎಲ್ಲ ಅಧ್ಯಯನಗಳ ಪರಿಣಾಮವಾಗಿ ಅವರ ನಾಸ್ತಿಕಭಾವ ಕ್ರಮೇಣ ತಾತ್ತ್ವಿಕ ಸಂಶಯವಾದವಾಗಿ ಪರಿಣಮಿಸಿತು.

ಅವರ ಪ್ರಾರಂಭಾವಸ್ಥೆಯ ಭಾವಪ್ರವಣತೆ ಮತ್ತು ಮುಗ್ಧತೆ ಈಗ ಕಣ್ಮರೆಯಾಗತೊಡಗಿದವು. ಒಂದು ರೀತಿಯ ಶುಷ್ಕತೆ ಮತ್ತು ಭಕ್ತಿ-ಪ್ರಾರ್ಥನೆಗಳ ಅಸಮರ್ಥತೆ — ಇವು ಅವರನ್ನು ಆವರಿಸಿದವು. ನಿರ್ವಿಣ್ಣತೆ ಅವರ ಅಂತರಂಗವನ್ನು ಕಾಡುತ್ತಿತ್ತು. ಅದನ್ನು ಅವರು ನಿರ್ಭೀತಿಯಿಂದ ಎಲ್ಲವನ್ನೂ ಅಪಹಾಸ್ಯ ಮಾಡುವ ತಮ್ಮ ಸ್ವಭಾವದಿಂದ ಮುಚ್ಚಿಕೊಂಡಿದ್ದರು. ಆದರೆ ಸಂಗೀತವೊಂದೇ ಈಗ ಅವರ ಅಂತರಂಗವನ್ನು ಕಲಕಲು ಸಮರ್ಥವಾಗಿತ್ತು . ಅದರ ಮೂಲಕ ಅತೀತ ಸತ್ಯದ ಭಾವಸ್ಪರ್ಶ ವಾಗಿ ಅವರ ಕಣ್ಣು ಹನಿಗೂಡುತ್ತಿತ್ತು.

ಈ ಸಮಯದಲ್ಲಿಯೇ ಅವರು ನನ್ನೆಡೆಗೆ ಬಂದರು. ಹ್ಯೂಮ್ ಮತ್ತು ಹರ್ಬರ್ಟ್ ಸ್ಪೆನ್ಸರ್ ಇವರನ್ನು ಅವರಿಗೆ ಪರಿಚಯಿಸಿದ ಅದೇ ಸ್ನೇಹಿತನೇ ಅವರನ್ನು ನನ್ನ ಹತ್ತಿರ ಕರೆದು ಕೊಂಡು ಬಂದಿದ್ದು. ಇದಕ್ಕೆ ಮುಂಚೆ ನನಗೆ ಅವರ ಸ್ವಲ್ಪ ಪರಿ ಚಯವಿತ್ತು. ಆದರೆ ಈಗ ಅವರು ತಮ್ಮ ಅಂತರಂಗವನ್ನು ನನ್ನ ಮುಂದೆ ತೆರೆದಿಟ್ಟರು — ತಮ್ಮನ್ನು ಪೀಡಿಸುತ್ತಿರುವ ಸಂದೇಹ ಗಳನ್ನೂ ಆತ್ಯಂತಿಕ ಸತ್ಯವನ್ನು ಕುರಿತಾಗಿ ಯಾವುದೇ ನಿರ್ಣಯಕ್ಕೆ ಬರಲಾಗದ ತಮ್ಮ ಸ್ಥಿತಿಯನ್ನೂ ಹೇಳಿಕೊಂಡರು. ಭಗವದಸ್ತಿತ್ವಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿಯಲು ತಮ್ಮ ಈ ಸ್ಥಿತಿಗೆ ಸೂಕ್ತವಾದ ಕೆಲವು ಧಾರ್ಮಿಕ ಗ್ರಂಥಗಳನ್ನು ಸೂಚಿಸಬೇಕೆಂದು ಅವರು ಕೇಳಿಕೊಂಡರು. ನಾನು ಕೆಲವು ಗ್ರಂಥಗಳನ್ನು ಸೂಚಿಸಿದೆ. ಆದರೆ ಸಂಸ್ಥಾಬದ್ಧ ಮತೀಯ ವಿಚಾರಗಳು ಅವರ ಸಂದೇಹವನ್ನು ಇನ್ನೂ ಸಮರ್ಥಿಸಿದವು. ಅಲ್ಲದೆ, ನೀರಸ ಓದಿನಲ್ಲಿ ಅವರಿಗೆ ಯಾವುದೇ ಆಸಕ್ತಿ ಇರುವಂತೆ ಕಂಡುಬರಲಿಲ್ಲ. ಅವರ ಮನದಾಸೆ ಸತ್ಯವನ್ನು ಅನುಭವಿಸಬೇಕೆಂಬುದು. ಆದ್ದರಿಂದ ಅನುಭಾವಿಗಳ ಸಂಪರ್ಕ ಅವರಿಗೆ ಆವಶ್ಯಕವಾಗಿತ್ತು. ಪುಸ್ತಕಗಳಿಂದ ಅವರಿಗೆ ಯಾವುದೇ ಸ್ಫೂರ್ತಿ ದೊರೆಯುವಂತಿರಲಿಲ್ಲ. ಅವರಿಗೆ ಬೇಕಾ ದುದು ಜೀವ ಕೆರಳಿಸುವ ಜೀವ, ಚಿಂತನೆಯನ್ನು ಪ್ರಜ್ವಲಿಸುವ ಚಿಂತನೆಗಳು.

ಅವರು ನನಗೆ ತುಂಬ ಆಕರ್ಷಕರಾದರು. ಏಕೆಂದರೆ ಆಗ ನನಗೆ ತಿಳಿಯಿತು, ಅವರು ಅತ್ಯಂತ ಪ್ರಾಮಾಣಿಕವಾಗಿ ಈ ಸಮಸ್ಯೆಗಳನ್ನು ಎದುರಿಸುತ್ತಾರೆ ಎಂದು.

ಷೆಲ್ಲಿಯ ಪುಸ್ತಕಗಳನ್ನು ಒಂದೊಂದಾಗಿ ಅವರಿಗೆ ಓದಲು ಕೊಟ್ಟೆ. ಷೆಲ್ಲಿಯ ಚೈತನ್ಯಾತ್ಮಕ ಬೌದ್ಧಿಕ ಸೌಂದರ್ಯ ಸ್ತುತಿ, ವಿಶ್ವದೇವೈಕ್ಯವಾದ, ಸಾರ್ವತ್ರಿಕ ಪ್ರೀತಿ, ವೈಭವಯುತ ಸ್ವರ್ಗೀಯ ಮಾನವಕೋಟಿಯ ದರ್ಶನ — ಇವುಗಳಿಂದ ವಿವೇಕಾನಂದರು ಹೆಚ್ಚು ಆಕರ್ಷಿತರಾದರು; ತತ್ತ್ವಜ್ಞಾನಿಗಳ ವಿಚಾರಪೂರ್ಣ ವಾದ ಗಳು ಅವರನ್ನು ಒಲಿಸಲು ಅಸಮರ್ಥವಾದವು. ಜಗತ್ತು ಅವರ ಪಾಲಿಗೆ ನಿರ್ಜೀವ, ನಿಷ್ಪ್ರೇಮ, ಯಾಂತ್ರಿಕ ವಸ್ತುವಾಗಿ ಉಳಿಯ ಲಿಲ್ಲ. ಅದರ ಹಿಂದೆ ಆಧ್ಯಾತ್ಮಿಕ ತತ್ತ್ವದ ಐಕ್ಯತೆ ಇದೆ.

ಷೆಲ್ಲಿಯವರ ಐಕ್ಯತೆಯ ಕಲ್ಪನೆಗಿಂತ ಉನ್ನತವಾದ ಐಕ್ಯತೆಯ ಬಗ್ಗೆ ಅಂದರೆ ವಿಶ್ವಚೈತನ್ಯವಾದ ಪರಬ್ರಹ್ಮದ ಕುರಿತಾಗಿ ನಾನು ಅವರಿಗೆ ವಿವರಿಸತೊಡಗಿದೆ. ಆಗ ನನ್ನ ಅಭಿಪ್ರಾಯ ಯಾವು ದೆಂದರೆ ಮೂರು ಅಂಶಗಳನ್ನು ಒಂದುಗೂಡಿಸುವುದು. ಅವಾವು ವೆಂದರೆ: ವೇದಾಂತದ ಅದ್ವೈತ ತತ್ತ್ವ, ಹೆಗೆಲರ ನಿರಪೇಕ್ಷ ಭಾವನೆ (idea) ಮತ್ತು ಫ್ರೆಂಚ್ ಚಳುವಳಿಯ ಮೂಲಮಂತ್ರ ವಾದ ಸಮಾನತೆ, ಸ್ವಾತಂತ್ರ್ಯ ಹಾಗೂ ಸೋದರತ್ವ. ನನ್ನ ದೃಷ್ಟಿಯು ವೈಯಕ್ತಿಕತೆಯೇ ಎಲ್ಲ ದೋಷಗಳ ಮೂಲ ಎಂಬುದಾಗಿತ್ತು. ವಿಶ್ವಚೈತನ್ಯವೇ ಸರ್ವಸ್ವ ; ಪ್ರಕೃತಿ, ಜೀವತತ್ವ ಮತ್ತು ಇತಿಹಾಸ — ಇವು ನಿರಪೇಕ್ಷ ಭಾವನೆಯ ಪ್ರಗತಿಪರ ಅಭಿವ್ಯಕ್ತಿ. ಎಲ್ಲ ನೈತಿಕ, ಸಾಮಾಜಿಕ, ಹಾಗೂ ರಾಜಕೀಯ ಸಿದ್ಧಾಂತಗಳು ಮತ್ತು ತತ್ತ್ವಗಳು ಶುದ್ಧ ಚೈತನ್ಯದೊಡನೆ ಹೊಂದಿಕೊಳ್ಳುವಂತಿರಬೇಕು. ಭಾವಪ್ರವಣತೆ ನನ್ನ ಪಾಲಿಗೆ ಮಾನಸಿಕ ದೌರ್ಬಲ್ಯವಾಗಿತ್ತು. ದ್ರವ್ಯವಸ್ತು, ವೈಯಕ್ತಿಕತೆ ಮತ್ತು ಅವಿಚಾರತೆ ಇವುಗಳ ಪ್ರತಿ ರೋಧವನ್ನು ಜಯಿಸಿ ಶುದ್ಧಚೈತನ್ಯದ ಅಭಿವ್ಯಕ್ತಿಯನ್ನು ಸಾಧ್ಯ ಗೊಳಿಸುವುದೇ ಜೀವನದ, ಸಮಾಜದ, ಶಿಕ್ಷಣದ ಹಾಗೂ ರಾಜ ಕೀಯದ ಬಹುದೊಡ್ಡ ಸಮಸ್ಯೆ. ಸಮಾನತೆ, ಸ್ವಾತಂತ್ರ್ಯ ಮತ್ತು ಸೋದರತ್ವ — ಈ ಉದಾತ್ತ ಆದರ್ಶದಿಂದ ಕೂಡಿದ ಹೊಸ ರಾಜಕೀಯ ಆಂದೋಲನದಿಂದ ಜನಾಂಗವನ್ನು ಅವಿಚಾರದ ಬಂಧನದಿಂದ ಮುಕ್ತಗೊಳಿಸಬಹುದು ಎಂಬುದು ನನ್ನ ದೃಢ ನಂಬಿಕೆಯಾಗಿತ್ತು. ಅನನುಭವಿ ಯುವಕನ ಉತ್ಸಾಹದೊಂದಿಗೆ ನಾನು ಈ ನಂಬಿಕೆಗೆ ಕಟಿಬದ್ಧನಾಗಿದ್ದೆ.

ವೈಯಕ್ತಿಕತೆಯ ನಿಷೇಧ ಹಾಗೂ ವಿಶ್ವಚೈತನ್ಯದ ಸಾರ್ವ ಭೌಮತ್ವ — ಇದೇ ನೈತಿಕತೆಯ ತಳಹದಿ. ಈ ಬಗೆಯ ಚಿಂತನೆ ಗಳು ವಿವೇಕಾನಂದರ ವೈಚಾರಿಕ ಬುದ್ಧಿಗೆ ತೃಪ್ತಿಯನ್ನು ನೀಡಿ ದವು, ಮತ್ತು ಸಂಶಯವಾದ ಹಾಗೂ ಜಡವಾದಗಳಿಂದ ಹೊರಬರಲು ಸಹಾಯ ಮಾಡಿದವು. ಇದರಿಂದ ಅವರ ಜೀವ ನಕ್ಕೆ ಒಂದು ಹೊಸ ನಿರ್ದೇಶನವೂ ದೊರಕಿದಂತಾಯಿತು. ಆದರೆ ಇದು ಅವರಿಗೆ ಶಾಂತಿಯನ್ನು ನೀಡಲಿಲ್ಲ. ಈಗ ಸಂಘರ್ಷವು ಅವರ ಅಂತರಂಗದಾಳವನ್ನು ಪ್ರವೇಶಿಸಿತು. ವಿಶ್ವಚೈತನ್ಯದ ಅನು ಭವವು ಮಹತ್ತರವಾದ ತ್ಯಾಗವನ್ನು ಅಪೇಕ್ಷಿಸುತ್ತಿತ್ತು. ಅವರಲ್ಲಿ ಕವಿ ಹೃದಯವಿತ್ತು, ಇಂದ್ರಿಯಗಳು ಚುರುಕಾಗಿದ್ದವು, ಯೌವ


ಬ್ರಜೇಂದ್ರನಾಥ ಸೀಲ್

ನದ ಉತ್ಸಾಹ ಮತ್ತು ಮಹತ್ವಾಕಾಂಕ್ಷೆಗಳು ಅವರಲ್ಲಿ ಕುದಿಯುತ್ತಿದ್ದವು. ಅವರದು ಹಾಸ್ಯಮಯ ಉಲ್ಲಾಸಭರಿತ ಜೀವನ — ಇವೆಲ್ಲವನ್ನೂ ಅವರು ಬದಿಗೊತ್ತ ಬೇಕಾಗಿತ್ತು, ಆ ಪರಮ ಸತ್ಯವನ್ನು ಅರಸಲು. ಇವುಗಳನ್ನೆಲ್ಲ ಬಿಟ್ಟುಬಿಡುವುದೆಂದರೆ ತಮ್ಮ ಸ್ವಾಭಾವಿಕತೆಯನ್ನೂ ಸ್ವಂತಿಕೆಯನ್ನೂ ಕಳೆದುಕೊಂಡಂತಾಗುತ್ತಿತ್ತು. ಈ ಹೋರಾಟ ಅನತಿ ಕಾಲದಲ್ಲಿಯೇ ನೈತಿಕ ಹೋರಾಟವಾಗಿ — ಬುದ್ಧಿಭಾವಗಳ ನಡುವಿನ ಘೋರ ಸಮರವಾಗಿ ಪರಿಣಮಿಸಿತು. ಇಂದ್ರಿಯಾಕರ್ಷಣೆಗಳು, ಮತ್ತು ಯೌವನಸಹಜ ಬಯಕೆಗಳು ಅವರಿಗೀಗ ಅಪವಿತ್ರವಾಗಿಯೂ ಅತ್ಯಂತ ಕೀಳಾಗಿಯೂ ಕಾಣತೊಡಗಿದವು. ಈ ಅವಧಿಯು ಅವರ ಜೀವನದಲ್ಲಿ ಗಾಢಾಂಧಕಾರದ ಪರೀಕ್ಷಾ ಸಮಯವಾಗಿತ್ತು. ಅವರ ಸಂಗೀತ ಪ್ರತಿಭೆಯು ಅನೇಕರನ್ನು ಅವರೆಡೆಗೆ ಆಕರ್ಷಿಸುತ್ತಿತ್ತು; ಆದರೆ ಅವರ ರೀತಿನೀತಿಗಳು ವಿವೇಕಾನಂದರಲ್ಲಿ ಅಸಹ್ಯವನ್ನುಂಟುಮಾಡುತ್ತಿದ್ದವು. ಆದರೆ ಅವರ ಉಲ್ಲಾಸ ಮನೋಭಾವ ಅಂಥವರಿಂದ ದೂರವಿರಲೂ ಅವರನ್ನು ಬಿಡುತ್ತಿರಲಿಲ್ಲ. ಆದ್ದರಿಂದ ಸಂಜೆ ಸಂಗೀತಗೋಷ್ಠಿಗಳಿಗೆ ನಾನು ಆಗಾಗ ಅವರೊಡನೆ ಹೋಗುತ್ತಿದ್ದುದು ಅವರಿಗೆ ಎಷ್ಟೋ ಸಮಾಧಾನವನ್ನುಂಟುಮಾಡುತ್ತಿತ್ತು.

ನಾನು ಅವರ ಸ್ವಭಾವದಲ್ಲಿ ಔನ್ನತ್ಯವನ್ನೂ ನಿಷ್ಠೆಯನ್ನೂ ಪವಿತ್ರತೆಯನ್ನೂ ಗುರುತಿಸಿದೆ. ಅವರಲ್ಲಿ ಯಾವಾಗಲೂ ಉತ್ಸಾಹ ತುಂಬಿಕೊಳ್ಳುತ್ತಿತ್ತು, ಅವರು ತುಂಬ ಸಂವೇದನಾಶೀಲರೂ ಆಗಿದ್ದರು. ಆದರೆ ಅತಿಕಟ್ಟುನಿಟ್ಟಿನ ಹಠಮಾರಿ ಸ್ವಭಾವದವರೂ ಆಗಿರಲಿಲ್ಲ. ಅವರು ತಮ್ಮ ಆರೋಗ್ಯದ ವಿಷಯದಲ್ಲಿ ಅತಿಕಾಳಜಿಯುಳ್ಳವರೂ ಆಗಿರಲಿಲ್ಲ. ಕಟುವಾಗಿಯೂ ವ್ಯಂಗ್ಯವಾಗಿಯೂ ಗೇಲಿಮಾಡುವ ಸ್ವಭಾವ ಅವರದಾದರೂ, ನನ್ನ ಮುಗ್ಧತೆ ಅದಕ್ಕೆ ಹೊರತಾಗಿತ್ತು. ಕುರುಡು ಸಂಪ್ರದಾಯಗಳನ್ನು ಅವಹೇಳನ ಮಾಡುವುದೇ ಅವರಿಗೊಂದು ಮೋಜಾಗಿತ್ತು. ಆಗ ಅವರು ಬೇರೆ ರೀತಿಯ ವ್ಯಕ್ತಿಯೇ ಆಗಿಬಿಡುತ್ತಿದ್ದರು. ಅವರ ನಿಕಟವರ್ತಿಗಳ ವಲಯದಿಂದ ಹೊರಗಿರುವರಿಗೆ ಆಶ್ಚರ್ಯವೂ ಗೊಂದಲವೂ ಉಂಟಾಗುವಂತೆ ಮಾಡುತ್ತಿದ್ದರು. ಆದರೆ ಅವರ ಅಂತರಂಗದಲ್ಲಿ ಮಾತ್ರ ಮಾಯಾಕರ್ಷಣೆಗಳ ವಿರುದ್ಧ ಮಹಾ ಹೋರಾಟ ನಡೆಯುತ್ತಿತ್ತು.

ಬಂಧನದಿಂದಲೂ ಕೊನೆಯಿಲ್ಲದ ಹೋರಾಟದಿಂದಲೂ ಬಿಡುಗಡೆ ಮಾಡುವ ಒಂದು ಶಕ್ತಿಯನ್ನು ಅವರು ಎಡೆಬಿಡದೆ ಅರಸುತ್ತಿದ್ದರು. ಇದಕ್ಕೆ ಉತ್ತರವಾಗಿ ನಾನು ಶುದ್ಧಚೈತನ್ಯದ ಸಾರ್ವಭೌಮತ್ವವನ್ನೂ ಅದರೊಡನೆ ಜೀವಾತ್ಮನ ತಾದಾತ್ಮ್ಯವನ್ನೂ ಸೂಚಿಸಬಲ್ಲವನಾಗಿದ್ದೆ, ಅಷ್ಟೇ. ಆ ದಿನಗಳಲ್ಲಿ ಪ್ಲೇಟೋನ ಅತೀತವಾದವೇ (transcendentalism) ನನ್ನ ಪಾಲಿಗೆ ಪರಮೋಚ್ಚವಾಗಿತ್ತು. ಹತೋಟಿಗೆ ಮೀರಿದ ಪ್ರತಿಭಟನಾ ಮನೋಭಾವ ನನ್ನದಾಗಿರಲಿಲ್ಲ. ತನ್ನನ್ನು ತಾನೇ ಆಳುವುದನ್ನು ಬಿಟ್ಟು ಬಾಹ್ಯ ಸಹಾಯಕ್ಕೆ ಕೈಯೊಡ್ಡುವುದಾಗಲಿ, ಯಾವುದೇ ಶಕ್ತಿಯ ಅನುಗ್ರಹಕ್ಕೆ ಶರಣಾಗುವುದಾಗಲಿ ನನ್ನ ಮನೋಭಾವಕ್ಕೆ ವಿರುದ್ಧವಾಗಿತ್ತು. ಈ ಜ್ಞಾನಮಾರ್ಗದಲ್ಲಿ ಭಾವದ ಆವಶ್ಯಕತೆಯಿದೆ ಎಂದು ನನಗನಿಸಲಿಲ್ಲ. ಆತ್ಮನಿಷ್ಠವಾದ ವಿಭಕ್ತ ಇಚ್ಛೆಯ ಅನುಭವವೂ ನನಗಾಗಿರಲಿಲ್ಲ. ಆದರ್ಶ ಮತ್ತು ವಾಸ್ತವಗಳ ನಡುವಿನ ವೈರುಧ್ಯವನ್ನೂ ಪ್ರಕೃತಿ ಮತ್ತು ಚೈತನ್ಯಗಳ ನಡುವಿನ ವೈರುಧ್ಯವನ್ನೂ ವಸ್ತುನಿಷ್ಠವಾಗಿ ನಾನು ಆಗಲೇ ಅನುಭವಿಸಿದ್ದೆನು. ಮುಂದೆ ಅದು ವೈಯಕ್ತಿಕ ಅನುಭವವೂ ಆಯಿತು, ಆದರೆ ವಿವೇಕಾನಂದರಿಗಾದ ರೂಪದಲ್ಲಿ ನನಗಾಗಲಿಲ್ಲ. ಆ ಸಂದರ್ಭದಲ್ಲಿ ಅವರ ಸಮಸ್ಯೆಗಳು ನನ್ನವು ಆಗಿರಲಿಲ್ಲ, ಅಥವಾ ನನ್ನ ತೊಂದರೆಗಳು ಅವರವು ಆಗಿರಲಿಲ್ಲ.

ಬೌದ್ಧಿಕವಾಗಿ ತಾನು ಸಮಷ್ಟಿತತ್ತ್ವವನ್ನು ಒಪ್ಪಿಕೊಂಡರೂ ಹೃದಯ ಇನ್ನೂ ವೈಯಕ್ತಿಕ ಅಹಂ ಕಡೆಗೇ ವಾಲಿಕೊಂಡಿದೆ, ಅಷ್ಟೇ ಅಲ್ಲದೆ, ಶುಷ್ಕ ವಿಚಾರವು, ಎಷ್ಟೇ ಶ್ರೇಷ್ಠವಾದರೂ, ಪ್ರಲೋಭನೆಯ ಸಮಯದಲ್ಲಿ ತನ್ನನ್ನು ರಕ್ಷಿಸಲಾರದು — ಎಂಬ ಚಿಂತನೆಗಳು ವಾಸ್ತವರೂಪದಲ್ಲಿ ತನ್ನನ್ನು ರಕ್ಷಿಸಬಲ್ಲವೇ, ಮಾನವರೂಪದಲ್ಲಿ ಬಂದು ತನ್ನನ್ನೂ ಹಿಡಿದೆತ್ತಬಲ್ಲವೇ — ಎಂಬುದು ಅವರ ಪ್ರಶ್ನೆಯಾಗಿತ್ತು. ತನ್ನನ್ನು ಕೈಹಿಡಿದು ರಕ್ಷಿಸುವ ಮಹಾಶಕ್ತಿಯೊಂದಕ್ಕಾಗಿ ಅವರು ಹಾತೊರೆಯುತ್ತಿದ್ದರು. ತನ್ನ ಕ್ಲೈಬ್ಯವನ್ನು ತೊಲಗಿಸಿ, ತನ್ನ ಆಂತರಿಕ ಶೂನ್ಯತೆಯನ್ನು ಧನ್ಯತೆಯ ಭಾವದಿಂದ ತುಂಬುವ, ಆಂತರಿಕ ಕೋಲಾಹಲವನ್ನು ನೀಗಿಸುವ ಶ್ರೇಷ್ಠ ಗುರುವಿಗಾಗಿ ಅವರು ತವಕಿಸುತ್ತಿದ್ದರು.

ಆ ಸಂದರ್ಭದಲ್ಲಿ ನನಗೆ ಇದು ಅವಿಚಾರಿತ ದೌರ್ಬಲ್ಯವಾಗಿ ಕಂಡುಬಂದಿತು. ಈ ರೀತಿ ಹೊರಗಿನ ಭೌತಿಕ ಆಲಂಬನೆಯನ್ನು (ಒಂದು ವ್ಯಕ್ತಿಯ ರೂಪದಲ್ಲಿ) ಬಯಸುವುದು ವಿಚಾರವನ್ನು ಇಂದ್ರಿಯಗಳಿಗೆ ಬಲಿಕೊಟ್ಟಂತೆ ಎಂದೆನಿಸಿತು. ಹೋರಾಡುತ್ತಿರುವ ಆತ್ಮದ ಈ ರೀತಿಯ ಬಯಕೆಯನ್ನು ನನ್ನ ಅನನುಭವಿ ಆತ್ಮವು ವಿರೋಧಿಸಿತು. ತಮ್ಮ ಈ ಬಯಕೆಯನ್ನು ಪೂರ್ತಿಗೊಳಿಸುವವರಾರೆಂದು ವಿವೇಕಾನಂದರು ವ್ಯಾಕುಲತೆಯಿಂದ ಅರಸುತ್ತಿದ್ದರು. ಈ ಅರಸುವಿಕೆ ಅವರನ್ನು ಬ್ರಹ್ಮಸಮಾಜದ ಬೋಧಕರನ್ನೆಲ್ಲ ಸಂಧಿಸುವಂತೆ ಮಾಡಿತು. ಅವರಲ್ಲಿ ವಿವೇಕಾನಂದರು ಬಯಸುತ್ತಿದ್ದುದು ಸತ್ಯಾನುಭವದ ನೇರ ಸ್ಪರ್ಶವನ್ನು, ತಮ್ಮನ್ನುದ್ಧರಿಸುವ ನಿಜವಾದ ಶಕ್ತಿಯನ್ನು, ಕೇವಲ ತೋರಿಕೆಯ ಸಾಂತ್ವನದ ನುಡಿಗಳನ್ನಲ್ಲ. ಅಲ್ಲಿ ಅವರು ಕೇಳುತ್ತಿದ್ದ ನೈತಿಕ ಪ್ರವಚನಗಳು, ತತ್ತ್ವ

ಗಳು ಇತ್ಯಾದಿಗಳೆಲ್ಲ ಅವರಿಗೆ ಸಪ್ಪೆಯಾಗಿದ್ದವು, ಅವರು ಅದರಲ್ಲಿ ರುಚಿಯನ್ನು ಕಳೆದುಕೊಂಡಿದ್ದರು. ಅವು ಕೇವಲ ಮನಸ್ಸಿನ ಆಹಾರವಾಗಿದ್ದವು, ಜೀವದ ಹಸಿವನ್ನು ನೀಗಿಸುವಂತಿರಲಿಲ್ಲ. ಅವರು ವಿವಿಧ ಗುರುಗಳನ್ನು ಸಂದಿಸಿದರು, ವಿವಿಧ ಮತಪಂಥ ಗಳನ್ನು ಕೆದಕಿ ನೋಡಿದರು. ಈ ಅನ್ವೇಷಣೆಯು ಕೊನೆಯಲ್ಲಿ ಅವರನ್ನು ದಕ್ಷಿಣೇಶ್ವರದ ಪರಮಹಂಸರ ಮುಂದೆ ತಂದು ನಿಲ್ಲಿ ಸಿತು. ಮೊದಲು ಅವರು ಸಂಶಯ ದೃಷ್ಟಿಯಿಂದಲೇ ಪರಮ ಹಂಸರನ್ನು ಸಂಧಿಸಿದರು ಎಂಬುದು ನಿಜ. ಪರಮಹಂಸರಷ್ಟು ಅಧಿಕಾರವಾಣಿಯಿಂದ ಮಾತನಾಡಿದವರಾರನ್ನೂ ಅವರು ಸಂಧಿ ಸಿರಲಿಲ್ಲ. ಪರಮಹಂಸರ ಶಕ್ತಿ ಅವರಾತ್ಮಕ್ಕೆ ಶಾಂತಿಯನ್ನು ನೀಡಿತು. ಅವರ ಅಂತರಂಗದ ಗಾಯವನ್ನು ಗುಣಪಡಿಸಿತು. ಆದರೆ ಅವರ ಆಂದೋಲನಕಾರ ಬುದ್ಧಿಯು ಪರಮಹಂಸರನ್ನು ಇನ್ನೂ ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಪರಮಹಂಸರ ಸನ್ನಿಧಿ ಯಲ್ಲಿ ತಾನು ಪಡೆಯುತ್ತಿರುವ ಶಾಂತಿಯು ಒಂದು ಭ್ರಮೆ ಯಾಗಿರಬಹುದು ಎಂದು ಅವರು ಸಂದೇಹಿಸಿದರು. ಆದರೆ ಈ ಸಂದೇಹ ಬಹುಕಾಲ ಉಳಿಯಲಿಲ್ಲ. ಪರಮಹಂಸರ ಪ್ರತ್ಯಕ್ಷಾನು ಭವವು ಅವರ ತೀಕ್ಷ್ಣಬುದ್ಧಿಯ ಸಂದೇಹಗಳನ್ನೆಲ್ಲ ನಾಶಗೊಳಿ ಸಿತು.

ನನ್ನ ಕಣ್ಮುಂದೆಯೇ ಅವರಲ್ಲುಂಟಾಗುತ್ತಿದ್ದ ಪರಿವರ್ತನೆ ಯನ್ನು ನಾನು ಅತ್ಯಾಸಕ್ತಿಯಿಂದ ವೀಕ್ಷಿಸುತ್ತಿದ್ದೆ. ನನ್ನಂತೆಯೇ ಒಮ್ಮೆಗೇ ವೇದಾಂತಿಯೂ ಹೆಗೆಲ್ ಅನುಯಾಯಿಯೂ ಕ್ರಾಂತಿ ಕಾರಿಯೂ ಆದ ಯುವಕನೊಬ್ಬನು ಕಾಳೀಪೂಜೆಯ ಧಾರ್ಮಿಕ ಸಂಪ್ರದಾಯದ ಕಡೆ ವಾಲಿದುದು ಆಶ್ಚರ್ಯವೇ. ಆದರೆ ಇದ ಕ್ಕಿಂತಲೂ ಆಶ್ಚರ್ಯವಾದ ಸಂಗತಿಯೇನೆಂದರೆ: ಎಲ್ಲ ಸಂಪ್ರ ದಾಯಗಳನ್ನೂ ಹಳಿಯುವ ಸ್ವತಂತ್ರಚಿಂತಕರಾದ ವಿವೇಕಾನಂದ ರಂತಹವರು, ರಚನಾತ್ಮಕವೂ ಆದಮ್ಯವೂ ಆದ ಬುದ್ಧಿಶಕ್ತಿಯುಳ್ಳ ಅವರು ತುಂಬ ಅಸಹಜವೂ ರಹಸ್ಯಾತ್ಮಕವೂ ಆದ ವಿಚಾರ ಧಾರೆಯ ಸುಳಿಯಲ್ಲಿ ಸಿಕ್ಕಿಹಾಕಿಕೊಂಡಿರುವುದು ಆಗಿನ ಸಂದರ್ಭ ದಲ್ಲಿ ನನಗೆ ದಿಗ್ಭ್ರಮೆಯನ್ನುಂಟುಮಾಡಿತು. ನನ್ನ ತಾತ್ತ್ವಿಕ ಸಿದ್ಧಾಂತಕ್ಕೆ ಅದೊಂದು ಒಗಟಾಗಿ ಉಳಿಯಿತು. ನಾನು ಪಕ್ಷಾಂತರ ವೆಂದೇ ಪರಿಗಣಿಸಿದ ಅವರ ಈ ಕಾರ್ಯ ನನಗೆ ತೀವ್ರ ವ್ಯಥೆ ಯನ್ನು ಉಂಟುಮಾಡಿತು. ಅದು ಎಷ್ಟಾದರೂ ನನ್ನ ವೈಯಕ್ತಿಕ ಭಾವ. ನಮ್ಮದೇ ಆದ ಯಾವುದೋ ಅಭಿಪ್ರಾಯಕ್ಕೆ ನಾವು ಕಟ್ಟು ಬಿದ್ದಾಗ ಅದಕ್ಕೆ ವಿರುದ್ಧವಾದುದು ನಮಗೆ ಅಸಹ್ಯವಾಗುತ್ತದೆ. ಅವರೊಡನೆ ನನ್ನ ವೈಯಕ್ತಿಕ ಸಂಬಂಧ ಎಷ್ಟು ಗಾಢವಾಗಿತ್ತೆಂದರೆ, ಅದು ನನ್ನನ್ನು ದಕ್ಷಿಣೇಶ್ವರಕ್ಕೆ ಸೆಳೆದುಕೊಂಡುಹೋಯಿತು. ವಿವೇಕಾನಂದರ ಗುರುವನ್ನು ನೋಡಿ, ಅವರ ಮಾತನ್ನು ಕೇಳಿ, ಇಡೀ ದಿನ ಆ ಪ್ರಶಾಂತ ವಾತಾವರಣದಲ್ಲಿ ಕಾಲಕಳೆಯುವಂತಾ ಯಿತು. ಸೂರ್ಯಾಸ್ತಮದ ಸಮಯದಲ್ಲಿ ಹಿಂದಿರುಗುವಾಗ ಮನಸ್ಸಿನಲ್ಲಿ ದೊಡ್ಡ ಬಿರುಗಾಳಿಯೇ ಉಂಟಾಗಿತ್ತು. ಒಂದು ರೀತಿಯ ನೈತಿಕ ಹಾಗೂ ಭೌತಿಕ ದಿಗ್ಭ್ರಮೆಯೊಂದಿಗೆ ನಾನು ಹಿಂದಿರುಗಿದೆ. ಅವ್ಯವಸ್ಥೆಯ ಹಿಂದೆಯೂ ಒಂದು ವ್ಯವಸ್ಥೆ ಇರ ಬಹುದು, ಆತ್ಮ-ಪರಕೀಯತೆಯಲ್ಲಿಯೂ ಸ್ವಸಂಕಲ್ಪದ ಸಾಧ್ಯತೆ, ಇಂದ್ರಿಯದೋಷಗಳೂ ಕೂಡ ವಿಚಾರದ ಪ್ರಾರಂಭಾವಸ್ಥೆ ಯಾಗಿರಬಹುದು ಮತ್ತು ನಮ್ಮನ್ನು ಉದ್ಧಾರಮಾಡುವ ಶಕ್ತಿ ಯೊಂದರಲ್ಲಿ ಶ್ರದ್ಧೆಯು ಸ್ವಸಂಕಲ್ಪದ ಮೂಲದಿಂದಲೇ ಹುಟ್ಟಿರ ಬಹುದು — ಈ ಬಗೆಯ ಚಿಂತನೆಗಳು ಆಗ ನನ್ನ ಮನಸ್ಸನ್ನು ಆವರಿಸಿಕೊಂಡಿದ್ದವು. ವಿವೇಕಾನಂದರ ಮುಂದಿನ ಜೀವನ ಚರಿತ್ರೆ ಈ ಚಿಂತನೆಗಳಿಗೆ ಸಮರ್ಥನೆಯನ್ನು ನೀಡಿತು. (ಸ್ವಪ್ರ ಯತ್ನ ಮತ್ತು ದೈವಾನುಗ್ರಹ - ಇವೆರಡರ ಸಾಮರಸ್ಯ ಮೇಲಿನ ಚಿಂತನೆಗಳ ಒಟ್ಟು ಸಾರಾಂಶ). ವಿವೇಕಾನಂದರು ತಮ್ಮ ಗುರು ವಿನ ಉದ್ಧಾರಕ ಅನುಗ್ರಹವನ್ನೂ ಶಕ್ತಿಯನ್ನೂ ಪಡೆದುಕೊಂಡು ವಿಶ್ವಮಾನವ ಭಾವನೆಯನ್ನೂ ಆತ್ಮನ ನಿರಂಕುಶ ಸಾರ್ವಭೌಮತ್ವ ವನ್ನೂ ಜಗತ್ತಿನಾದ್ಯಂತ ಬೋಧಿಸಿದರು. 

## ಯುವಚೇತನ



“ನಮಗೆ ಇಂದು ಬೇಕಾಗಿರುವುದೇ ಆತ್ಮನಿಗೆ ಸಂಬಂಧಪಟ್ಟ ಮಹಾಭಾವನೆ, ಅದರ ಅನಂತ ಶಕ್ತಿ, ಪರಿಶುದ್ಧತೆ ಮತ್ತು ಪರಿಪೂರ್ಣತೆ. ನನಗೆ ಒಂದು ಮಗುವಿದ್ದರೆ ಅದು ಹುಟ್ಟಿದಾಗಿನಿಂದಲೂ ಅದಕ್ಕೆ “ನೀನು ಪರಿಶುದ್ಧಾತ್ಮ” ಎಂದು ಹೇಳುತ್ತಿದ್ದೆ. ಪುರಾಣದಲ್ಲಿ ಬರುವ ರಾಣಿ ಮದಾಲಸೆಯ ಸುಂದರವಾದ ಕಥೆಯನ್ನು ನೀವು ಕೇಳಿರಬಹುದು. ಅವಳಿಗೆ ಮಗುವಾದ ತಕ್ಷಣವೇ ತೊಟ್ಟಿಲಲ್ಲಿ ಇಟ್ಟು ತೂಗುವಾಗ, “ನೀವು ಪರಿಶುದ್ಧಾತ್ಮ, ಕಳಂಕರಹಿತ, ಪಾಪದೂರ, ಶಕ್ತಿಶಾಲಿ, ಪರಮಶ್ರೇಷ್ಠ” ಎಂದು ಹಾಡುತ್ತಿದ್ದಳು. ಅದರಲ್ಲಿ ತುಂಬಾ ಸತ್ಯವಿದೆ. ನೀವು ಶ್ರೇಷ್ಠರೆಂದು ಭಾವಿಸಿ, ಶ್ರೇಷ್ಠರಾಗುವಿರಿ.

“ನಮಗೆ ಮಾಡಲು ಅಸಾಧ್ಯವಾಗಿ ಇರುವುದು ಯಾವುದಿದೆ? ಏನನ್ನುಬೇಕಾದರೂ ಸಾಧಿಸ ಬಲ್ಲೆವು. ನಮ್ಮಲ್ಲಿ ಎಲ್ಲರಲ್ಲಿಯೂ ಪರಂಜ್ಯೋತಿಯಾದ ಆತ್ಮನಿರುವನು. ಇದನ್ನು ನಂಬೋಣ. ನಚಿಕೇತನಿಗಿದ್ದಂತಹ ಶ್ರದ್ಧೆ ಇರಲಿ. ತಂದೆ ಯಜ್ಞ ಮಾಡುತ್ತಿದ್ದಾಗ ನಚಿಕೇತನಿಗೆ ಶ್ರದ್ಧೆ ಬಂತು. ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಅಂತಹ ಶ್ರದ್ಧೆ ಬರಲಿ. ವೀರರಂತೆ, ಧೀರರಂತೆ ನಿಂತು, ಪ್ರಚಂಡ ಬುದ್ಧಿಶಕ್ತಿಯಿಂದ ದೇವರಂತೆ ನೀವು ಜಗಜ್ಜಾಲಕರಾಗಿ ಎಂದು ನಾನು ಆಶಿಸುತ್ತೇನೆ. ಉಪನಿಷತ್ತಿನಿಂದ ದೊರಕುವ ಶಕ್ತಿ ಇದು, ಶ್ರದ್ಧೆ ಇದು.” *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೩, ಪು.೧೨೦-೨೨)*

# ಜೀವನದ ಮೌಲ್ಯಗಳ ಮೂಲ : ಸನಾತನ ಧರ್ಮ

ಸ್ವಾಮಿ ಸುಖಾತ್ಮಾನಂದ

ಸನಾತನ ಧರ್ಮ ನಮಗೆ ತಿಳಿಸಿಕೊಡುವ ಮೌಲ್ಯಗಳು ಸಾರ್ವತ್ರಿಕವಾದ, ಸರ್ವಮಾನ್ಯವಾದ ಆಧ್ಯಾತ್ಮಿಕ ವಿಚಾರಗಳಾಗಿವೆ. ಅವು ಕಾಲ-ದೇಶ, ಜಾತಿ-ಪಂಗಡ ಹಾಗೂ ಸ್ಥಾನ-ಮಾನಗಳ ಭೇದವಿಲ್ಲದೆ, ಮಾನವಕೋಟಿಗೆ ಶ್ರೇಷ್ಠ ಬದುಕನ್ನು ಕಲಿಸಿಕೊಡುವ ಆದರ್ಶ ಗಳಾಗಿವೆ. ಈ ವಿಷಯವನ್ನು ಕುರಿತು ಇಲ್ಲಿ ವಿವೇಚಿಸಿರುವ ಲೇಖಕರು ರಾಮಕೃಷ್ಣ ಮಹಾಸಂಘದ ಹಿರಿಯ ಸಂನ್ಯಾಸಿಗಳು. ಪೊನ್ನಂಪೇಟೆ, ಮೈಸೂರು, ಸೇಲಂ ಮುಂತಾದ ಕಡೆ ಸೇವೆ ಸಲ್ಲಿಸಿರುವ ಅವರು ಊಟಿ ರಾಮಕೃಷ್ಣ ಮಠದ ಅಧ್ಯಕ್ಷರಾಗಿದ್ದು, ಈಗ ನಿವೃತ್ತ ಜೀವನ ನಡೆಸುತ್ತಿದ್ದಾರೆ.



ಸನಾತನ ಧರ್ಮವು ವಿಶ್ವಸಮ್ಮತ ವಿಚಾರವನ್ನು ತತ್ತ್ವಶಾಸ್ತ್ರ ಸಂಬಂಧಿತ ಅಭಿಪ್ರಾಯಗಳ ಆಧಾರಗಳ ಮೇಲೆ, ದೈನಂದಿನ ಅಭ್ಯಾಸಕ್ಕೆ ಸರಿ ಒಪ್ಪುವ ಮಾರ್ಗವನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಮಾನವನಿಗೆ ನೀಡುತ್ತದೆ. ಇದು ಗಗನದಷ್ಟು ವಿಶಾಲ ಹಾಗೂ ಸಾಗರದಷ್ಟು ಆಳ. ಇದರ ಪ್ರಮುಖ ವೈಶಿಷ್ಟ್ಯ ಮಾನವ ಹಾಗೂ ಸೃಷ್ಟಿಯಲ್ಲಿ ಅವನ ಸಮಾವೇಶ. ಮಾನವ ಯಾರು? ಎಲ್ಲಿಂದ ಬಂದಿದ್ದಾನೆ? ಯಾವ ಕಾರಣಕ್ಕಾಗಿ ಇಲ್ಲಿದ್ದಾನೆ? - ಇವು ಪ್ರತಿಯೊಬ್ಬನನ್ನೂ ಕೆರಳಿಸುವ ಕೆಲವು ಮೂಲಭೂತ ಪ್ರಶ್ನೆಗಳು. ಇದಕ್ಕೆ ಉತ್ತರ, ಮಾನವ ಒಂದು ಆತ್ಮ, ಚೈತನ್ಯ, ದೈವಾಗ್ನಿಯ ಒಂದು ಕಣ, ಸತ್-ಚಿತ್-ಆನಂದ. ಇದು ಶರೀರ, ಮನಸ್ಸು, ಅಹಂಕಾರಗಳನ್ನು ಒಳಗೊಂಡು, ಜನನ ಮರಣಗಳ ಪುನರಾವರ್ತನೆಯುಳ್ಳ 'ಸಂಸಾರ'ವನ್ನು ಅನುಭವಿಸುವುದು. ಮಾನವ ಜನ್ಮ ಅತ್ಯಂತ ಮಹತ್ವಪೂರ್ಣವಾದುದು .

ವೇದಗಳು ಪ್ರತಿಪಾದಿಸುವ ಈ ಸನಾತನ ಧರ್ಮಗಳೇನು? 'ಧರ್ಮ' ಎಂಬುವ ಶಬ್ದ ಮಾನವನೂ ಸೇರಿದಂತೆ ಎಲ್ಲ ವಸ್ತುಗಳ ನೈಜ ಸ್ವಭಾವವನ್ನು ಸೂಚಿಸುತ್ತದೆ. ಅವು ಸುನಿಶ್ಚಿತವಾದ ಸತ್ಯಗಳು. ಮಾನವನಿಗೂ, ಎಲ್ಲ ಜೀವಿಗಳಿಗೂ, ಎಲ್ಲ ಕಾಲದಲ್ಲೂ, ಎಲ್ಲ ಸನ್ನಿವೇಶಗಳಲ್ಲೂ ಉಪಕಾರಿಯಾದುದರಿಂದ ಅವುಗಳು ಸನಾತನ ಎಂದು ಕರೆಯಲ್ಪಡುತ್ತದೆ. ಸತ್ಯಾನ್ವೇಷಣೆಯ ಗುರಿಯನ್ನು ಇದು ನಿರ್ದೇಶಿಸುತ್ತದೆ - ಮತ, ಕುಲ, ಧರ್ಮ, ವರ್ಣ, ಲಿಂಗ, ನಂಬಿಕೆ ಇವುಗಳಿಂದ ಸ್ವತಂತ್ರವಾದ ಸತ್ಯ. ಇದು ಎಲ್ಲ ಜೀವಿಗಳಿಗೂ ಸಮವಾಗಿ ಒಳ್ಳೆಯದನ್ನೇ ಮಾಡುವುದು. ಇದನ್ನು ಒಂದೇ ವಾಕ್ಯರಣೆಯಲ್ಲಿ ಹೇಳುವುದಾದರೆ ಮಾನವನ ಸಾರಭೂತವಾದ ಸದ್ಗುಣ. ತನ್ನ ಯೋಗಕ್ಷೇಮ - **ಅಭ್ಯುದಯ** ಮತ್ತು ಎಲ್ಲ ಜೀವಿಗಳ ಕ್ಷೇಮ - **ನಿಃಶ್ರೇಯಸ** ಎಂಬ ಉದ್ದೇಶವನ್ನು ಪೂರ್ಣಗೊಳಿಸುವುದು.

ವೇದಗಳು ಪ್ರತಿಪಾದಿಸುವ ಸನಾತನ ಧರ್ಮ ನಮ್ಮ ಬಾಳಿನಲ್ಲಿ ಭರವಸೆ ಮೂಡಿಸುವುದು, ಬಾಳಿಗೊಂದು ಅರ್ಥವನ್ನು ಕರುಣಿಸುವುದು ಮತ್ತು ಬಾಳಿನ ಹೋರಾಟದಲ್ಲಿ ನೆಮ್ಮದಿಯನ್ನು ಕರುಣಿಸುವುದು. ಇವನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು:

೧. ಶಾಸ್ತ್ರಗಳಲ್ಲಿ ಹೇಳಿರುವ ಆಧ್ಯಾತ್ಮಿಕ ಅನುಭವಗಳೇ ಅಂತಿಮ ಪ್ರಮಾಣ, ಕೇವಲ ತರ್ಕವಲ್ಲ.

೨. ದೇವನೊಬ್ಬನೇ - ಅವನ ನಾಮರೂಪಗಳು ಅನೇಕ - 'ಏಕಂ ಸತ್ ವಿಪ್ರಾಃ ಬಹುಧಾ ವದಂತಿ.'

೩. ಎಲ್ಲ ಜೀವಿಗಳೂ ತಾವು ಬಿತ್ತಿದ ಬೀಜಗಳಿಗನುಸಾರ ಜೀವನದಲ್ಲಿ ಕಷ್ಟಗಳನ್ನು ಅನುಭವಿಸುತ್ತಾರೆ.

೪. ಕರ್ಮ, ಭಕ್ತಿ ಮತ್ತು ಜ್ಞಾನ ಇವುಗಳ ಸಾಧನೆಯ ಮೂಲಕ, ಮಾನವರು ಜೀವನದ ಕಷ್ಟಗಳಿಂದ ಪಾರಾಗಿ, ಪರಿಪೂರ್ಣತೆಯನ್ನು ಸಾಧಿಸಲು ಅನೇಕ ಮಾರ್ಗಗಳಿವೆ.

೫. ಪ್ರತಿಯೋರ್ವನೂ ದೈವೀಸಂಪತ್ತನ್ನು ಬೆಳಸಿಕೊಂಡು ಧರ್ಮಾತ್ಮನಾಗಿ ಜ್ಞಾನದ ಬೆಳಕನ್ನು ಕಂಡುಕೊಳ್ಳುವವನಾಗಬೇಕು. ಕೇವಲ ನೇಮನಿಷ್ಠೆಗಳನ್ನು ಪಾಲಿಸಿ, ಸಭ್ಯ ವ್ಯಕ್ತಿ ಎನಿಸಿಕೊಂಡರೆ ಸಾಲದು.

೬. ಪ್ರತಿಯೊಬ್ಬನೂ ತನ್ನ ಯೋಗ್ಯತೆ, ಅಭಿರುಚಿ, ಪ್ರವೃತ್ತಿಗನುಸಾರವಾಗಿ ತನ್ನ ಮಾರ್ಗವನ್ನು ಆಯ್ದುಕೊಳ್ಳಬೇಕು.

೭. ಲೌಕಿಕ ವಿಚಾರಗಳ ಬೆನ್ನಟ್ಟದೆ ಸ್ವತಂತ್ರರಾಗಿ ಆಧ್ಯಾತ್ಮಿಕ ರಾಜ್ಯವನ್ನು ಪ್ರವೇಶಿಸಿದರೆ ಪರಿಪೂರ್ಣತೆಯ ಪ್ರಾಪ್ತಿ.

ಸನಾತನ ಧರ್ಮದ ಪೂರ್ಣ ಉದ್ದೇಶವಿದು: ಮಾನವನಿಗೆ ಅವನ ಶಾರೀರಿಕ, ಬೌದ್ಧಿಕ, ನೈತಿಕ ಮತ್ತು ಭಾವನಾತ್ಮಕ ದೃಷ್ಟಿಕೋನಗಳಿಗೆ, ಆತ್ಮಸಾಕ್ಷಾತ್ಕಾರ ಅಥವಾ ಭಗವತ್ಸಾಕ್ಷಾತ್ಕಾರ ಅಥವಾ

ಪರಿಪೂರ್ಣತೆ ಅಥವಾ ಬಾಳಿನ ಗುರಿ ಅಥವಾ ಜ್ಞಾನೋದಯ ಅಥವಾ ಇವೆಲ್ಲವನ್ನೂ ಒಂದೇ ಶಬ್ದದಲ್ಲಿ ಹೇಳುವುದಾದರೆ 'ಪರಮ ಪುರುಷಾರ್ಥ' ಇದರ ಸಮರಸದ ಅನುಭವ ಗಳಿಸುವ ಅನ್ವೇಷಣೆಯ ವಿವಿಧ ಹಂತಗಳಲ್ಲಿ ಶಿಕ್ಷಣ ಕೊಡುವುದು.

ಈ ಅನ್ವೇಷಣೆಯ ಮೌಲ್ಯಗಳುಳ್ಳ ತಾತ್ವಿಕ ಮಾರ್ಗದರ್ಶನ, ಕೆಳಹಂತದಲ್ಲಿ ತನ್ನ ಒಳಿತಿಗಾಗಿ ಮತ್ತು ವಿಶ್ವಮಟ್ಟದಲ್ಲಿ ಎಲ್ಲರ ಒಳಿತಿಗಾಗಿ ಇರುವುದು. ಈ ಮೌಲ್ಯಗಳು ಬೆಳವಣಿಗೆಯ ವಿವಿಧ ಹಂತಗಳಲ್ಲಿ ಜನರಿಗೆ ಶಾಸನಗಳನ್ನು ಪಾಲಿಸುತ್ತಾ, ಧರ್ಮಶಾಸ್ತ್ರ ನಿಯಮಗಳನ್ನು ನಿರ್ವಹಿಸುತ್ತಾ, ಉನ್ನತ ಜೀವನಕ್ಕಾಗಿ ಆಶಿಸುತ್ತಾ, ಉತ್ತಮರೂ, ಉತ್ತಮತರರೂ, ಉತ್ತಮತಮರೂ ಆಗುತ್ತಾ, ಇತರರೂ ತಮ್ಮಂತೆಯೇ ಆಗಲು ಸಹಾಯ ಮಾಡಬೇಕು. ಒಬ್ಬ ವ್ಯಕ್ತಿ ಕೇವಲ ಸಭ್ಯವ್ಯಕ್ತಿಯಾದರೆ ಸಾಲದು. ಇವನಿಗಿಂತಲೂ ಎತ್ತರದಲ್ಲಿರುವವನು, ಬೆಳಕನ್ನು ಕಂಡುಕೊಂಡವನು, ಮತ್ತೂ ಎತ್ತರದಲ್ಲಿರುವವನು ಒಬ್ಬ ಆದರ್ಶವ್ಯಕ್ತಿ ಅಥವಾ ಮಹಾತ್ಮ ; ಪೂರ್ಣ ಸಾಮರ್ಥ್ಯದಿಂದ ಗುರುತಿಸಲ್ಪಡುವ, ಮಾನವನಾಗಬೇಕು. ನಾವು ತಿಳಿದಂತೆ ಮಾನವನು ದೇಹ ಮನಸ್ಸು ಮತ್ತು ಆತ್ಮವುಳ್ಳ ಒಂದು ಸಂಕೀರ್ಣ. ಶರೀರ ಪೋಷಣೆಗಾಗಿ ಆಹಾರ, ಮನೋವಿಕಾಸಕ್ಕಾಗಿ ತಿಳುವಳಿಕೆ ಮತ್ತು ಆತ್ಮನ ಪರಿಪೂರ್ಣತೆಗಾಗಿ ಆಧ್ಯಾತ್ಮಿಕ ಅನುಭವಗಳು ಅವಶ್ಯಕ. ಪರಿಪೂರ್ಣತೆ ಪಡೆಯಬೇಕೆಂಬ ದಾಹ ಅವನಲ್ಲಿ ಉತ್ಸಾಹ ತುಂಬಿ, ಇನ್ನೂ ಉತ್ತಮವಾದುದನ್ನು, ಇನ್ನಷ್ಟು ಉತ್ತಮವಾದುದನ್ನು ಪಡೆಯಲು ಪಡುವ ಸತತ ಪ್ರಯತ್ನ ಅನಾದಿ ಕಾಲದಿಂದಲೂ ನಡೆಯುತ್ತ ಬಂದಿದೆ. ಯಾವ ಮೌಲ್ಯಗಳು ಪರಿಪೂರ್ಣತೆ ಪಡೆಯಲು ದೇಹ, ಮನಸ್ಸು ಮತ್ತು ಆತ್ಮಗಳನ್ನು ಬಲಪಡಿಸುವುದೋ ಅವೇ ಶಾಶ್ವತ ಸನಾತನ ಮೌಲ್ಯಗಳು. ಜೀವನದ ಪಯಣದಲ್ಲಿ ಮಾನವನು ಅರಿವು ಮತ್ತು ಅನುಭವಗಳೊಡನೆ ಬೆಳೆಯುತ್ತಿದ್ದಂತೆ ಮೌಲ್ಯ, ಸತ್ಯ ಮತ್ತು ಭಗವಂತ ಇವುಗಳ ವಿಚಾರದಲ್ಲಿ ಅವನ ಮನೋಭಾವನೆಗಳು ಉದಾತ್ತವೂ, ಉನ್ನತವೂ, ಪರಿಶುದ್ಧವೂ ಮತ್ತು ಸೂಕ್ಷ್ಮವೂ ಆಗುತ್ತವೆ. ಕೆಳಸ್ತರದಿಂದ ಉನ್ನತ ಸ್ತರದವರೆಗೆ ಇರುವ ಅನೇಕ ವಿಚಾರಗಳು ವಿವಿಧ ಧಾರ್ಮಿಕ ಪಥಗಳ ಉದಯಕ್ಕೆ ಕಾರಣವಾಯಿತು. ಈ ಎಲ್ಲಾ ವೈವಿಧ್ಯಗಳ ನಡುವೆಯೂ ದೈವತ್ವವು ಬಂಗಾರದ ಸೂತ್ರದಂತೆ ಇವುಗಳೆಲ್ಲದರ ಮೂಲಕ ಹಾದುಹೋಗಿರುತ್ತದೆ.

ಮಾನವನ ವ್ಯಕ್ತಿತ್ವಕ್ಕೆ, ವೈಯುಕ್ತಿಕ ನೆಲೆಯಲ್ಲೂ, ಇಡೀ ವಿಶ್ವದ ನೆಲೆಯಲ್ಲೂ ಮೌಲ್ಯಗಳು ಮೂಲಭೂತ ಮಹತ್ವವುಳ್ಳದ್ದಾಗಿವೆ. ಅವು ಮನುಷ್ಯನಲ್ಲಿ ಸಹಜವಾಗಿರುವ ಶ್ರೇಷ್ಠತೆ, ಯುಕ್ತಾಯುಕ್ತ ಪರಿಜ್ಞಾನ, ನೈತಿಕ ಜವಾಬ್ದಾರಿಯ ಅರಿವು, ಸೃಜನಾತ್ಮಕ ಕಾರ್ಯಶಕ್ತಿಯ ಬೆಳವಣಿಗೆ, ಮೌಲ್ಯಯುಕ್ತ ಕೆಲಸಗಳನ್ನು ಮಾಡಬಲ್ಲೆವೆಂಬ ಭರವಸೆ, ಆತ್ಮಗೌರವ ಹಾಗೂ ವ್ಯಕ್ತಿಗತ ಪ್ರಾಮಾಣಿಕತೆಗಳ ಪ್ರಜ್ಞೆ ಮೂಡುವಂತೆ ಮಾಡುವುವು.

ಬಾಹ್ಯ ಹಾಗೂ ಆಂತರಿಕ ಪ್ರಕೃತಿಯ ಪ್ರಲೋಭನೆಗಳನ್ನು ನಿಗ್ರಹಿಸಿ ಅಭಿವೃದ್ಧಿ ಮತ್ತು ಪ್ರಗತಿಯ ಪಥದಲ್ಲಿ ಸಾಗಲು ಸಾಮಾನ್ಯವಾಗಿ ರೂಢಿಯಲ್ಲಿರುವ 'ಪ್ರಮಾಣ' ಎಂದು ಕರೆಯಲ್ಪಡುವ ಮೌಲ್ಯಗಳು ಮಾನವಕುಲದಿಂದ ಸೃಜಿಸಲ್ಪಟ್ಟಿವೆ. ಇವು ಕೇವಲ ಬಾಹ್ಯವಾಗಿದ್ದರೆ ಅದು ಬಾಳನ್ನು ಕೇವಲ ಯಾಂತ್ರಿಕವನ್ನಾಗಿಸಿ, ಮಾನವನನ್ನು ಒಂದು ಯಂತ್ರ ಅಥವ ಗುಲಾಮನನ್ನಾಗಿ ಮಾಡುವುದು. ಅದು ಆಂತರಿಕವೂ ಆದಾಗ ಎಲ್ಲರ ಒಳಿತನ್ನು ಬಯಸುವ ಆಧ್ಯಾತ್ಮಿಕ ವ್ಯಕ್ತಿಯನ್ನಾಗಿ ಮಾಡುವುದು. ಪ್ರಖ್ಯಾತ ಸಂತ ಕನ್‌ಫ್ಯೂಷಿಯಸ್ ಜೀವನದ ಮೌಲ್ಯಗಳನ್ನು ವಿವರಿಸುವಾಗ ಹೀಗೆ ಹೇಳುತ್ತಾರೆ : ''ತುಕ್ಕು ಹಿಡಿದಿರುವ ಕಬ್ಬಿಣದ ತುಂಡೊಂದನ್ನು ನೀವು ತೆಗೆದುಕೊಂಡರೆ ಅದನ್ನು ಮಾರುಕಟ್ಟೆಯಲ್ಲಿ ಉಪಯೋಗಕ್ಕೆ ಬಾರದ ಅವಶೇಷಗಳೆಂದು ಮಾರಬಹುದು. ಆದರೆ ಅದನ್ನು ಶುದ್ಧಗೊಳಿಸಿ ಹರಿತಮಾಡಿದಾಗ ಉಪಯುಕ್ತ ಯಂತ್ರೋಪಕರಣವಾಗಿ ಕೆಲಸ ಮಾಡಲು ಅದನ್ನು ಉಪಯೋಗಿಸಬಹುದು. ಅದನ್ನು ಇನ್ನೂ ಹದಗೊಳಿಸಿದಾಗ ಅದರಿಂದ ಇನ್ನೂ ಉತ್ತಮವಾದ ಸಾಧನಸಲಕರಣೆಗಳನ್ನು ತಯಾರು ಮಾಡಿ ಅತ್ಯಂತ ಉತ್ತಮ ಕೆಲಸಗಳಿಗೆ ಉಪಯೋಗಿಸಬಹುದು. ಇದರಂತೆಯೇ ಕಚ್ಚಾ ಎಣ್ಣೆಯನ್ನು ಸಂಸ್ಕರಿಸುವುದು – ಇದನ್ನು ಹೆಚ್ಚು ಸಂಸ್ಕರಿಸಿದಾಗ ವೈವಿಧ್ಯಮಯವಾದ ಉತ್ತಮ ಹಾಗೂ ಶ್ರೇಷ್ಠ ಉತ್ಪನ್ನಗಳನ್ನು ತಯಾರಿಸಬಹುದು.''

ವೇದಗಳು ಉಪಯೋಗಿಸುವ ಅರ್ಥಪೂರ್ಣ ಶಬ್ದ 'ಧರ್ಮ' ಎಂಬುದು ಪ್ರಧಾನ ನಿರ್ಬಂಧವಾಗಿ, ನಾವು ಸ್ವಚ್ಛಂದರಾಗಿ ವರ್ತಿಸದಂತೆ ಅಂಕೆಯಲ್ಲಿಡುವುದು. ಇದನ್ನು ಮೌಲ್ಯಗಳ ವಿಜ್ಞಾನ ಎಂದು ವರ್ಣಿಸಲಾಗಿದೆ. ಇದು ಅನೇಕ ಅರ್ಥಗಳನ್ನು ಧ್ವನಿಸುತ್ತದೆ. ಅವುಗಳು ಹೀಗಿವೆ: ಧರ್ಮ, ಸಂಪ್ರದಾಯ, ನಿಯಮ, ಪದ್ಧತಿ, ಧಾರ್ಮಿಕವಿಧಿ, ಕಟ್ಟಳೆ, ನೈತಿಕಮೌಲ್ಯ, ಉತ್ತಮ ಗುಣ, ಉತ್ತಮ ಕರ್ಮ, ನಡತೆ, ಚಾರಿತ್ರ್ಯ, ಕರ್ತವ್ಯ, ನ್ಯಾಯ, ನೀತಿ (ತತ್ತ್ವ) ನಿಯಮಗಳು, ನೀತಿ ಧರ್ಮ, ಪ್ರಾಮಾಣಿಕತೆ, ಪ್ರಕೃತಿ, ಮನೋಧರ್ಮ, ಗುಣಲಕ್ಷಣ, ವೈಶಿಷ್ಟ್ಯ, ಶಿಷ್ಟಾಚಾರ, ವಿಶಿಷ್ಟತೆ, ನಿಷ್ಪಕ್ಷಪಾತ, ಸತ್ಸಂಗ, ಮನುಷ್ಯ– ಪ್ರಯತ್ನ ಇನ್ನು ಮುಂತಾದವುಗಳು.

ಮೌಲ್ಯಗಳು ಹೊರ ಪ್ರಕೃತಿಯಿಂದ ಬರುವಂತಹುದಲ್ಲ, ಬಾಳಿನ ಕೆಳಮಟ್ಟದಲ್ಲಿ ಅದು ಚೆನ್ನಾಗಿ ಕೆಲಸ ಮಾಡಬಹುದು. ಆದರೆ ಮಾನವೀಯ ಹಂತದಲ್ಲಿ ವಿಕಸನ ಮತ್ತು ಪ್ರಗತಿ, ಸಾಮಾಜಿಕ, ಸಾಂಸ್ಕೃತಿಕ, ಮನೋವೈಜ್ಞಾನಿಕ ಮತ್ತು ವಿಶ್ವಮಟ್ಟಕ್ಕೆ ಏರುತ್ತದೆ. ಅತ್ಯಧಿಕ ಅಧಿಕಾರ ಮತ್ತು ಬುದ್ಧಿ ಶಕ್ತಿ ಮಾನವನನ್ನು ಪಿಶಾಚಿಯನ್ನಾಗಿ ಮಾಡಿಬಿಡುತ್ತದೆ ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. ಆದ್ದರಿಂದ ಮನಸ್ಸನ್ನು ನಿಗ್ರಹಗೊಳಿಸಿ ಈ ಅಪಾಯದಿಂದ ಪಾರಾಗಲು ಮೌಲ್ಯಗಳು ಅತ್ಯಂತ ಆವಶ್ಯಕ. ಮೌಲ್ಯಗಳ ಮತ್ತೊಂದರ್ಥ ನಮ್ಮ ಸುತ್ತಲಿರುವ ಪ್ರಪಂಚದ ಬಗ್ಗೆ ಕಾಳಜಿ ವಹಿಸುವುದು. ನನ್ನ ಶರೀರದಂತೆ ಇಲ್ಲದ ಮತ್ತೊಂದು ವಸ್ತು ನನ್ನೊಳಗಿದೆ ಎಂಬ ಉದಾತ್ತಭಾವನೆಗಳನ್ನು ನಾವು ರೂಢಿಸಿಕೊಳ್ಳಬೇಕು. 'ನಾನು ಶರೀರ' ಎಂಬ ವಿಷಯ ಹೋಗಿ 'ಶರೀರದಲ್ಲಿ ನೀನೆ' ಎಂಬುದಕ್ಕೆ ಸ್ಥಳಕೊಡಬೇಕು – 'ನಿಜವಾದ ನಾನು' –

ದೇಹ, ಮನಸ್ಸು ಮತ್ತು ಅಹಂಕಾರದಿಂದ ಭಿನ್ನವಾದುದು – ಚೈತನ್ಯ ಅಥವಾ ಆತ್ಮ. ಈ ವಿಷಯದ ಅಸ್ತಿತ್ವವನ್ನು ವೇದಗಳು ಬಹಳ ಹಿಂದೆಯೇ ಘೋಷಿಸಿವೆ. ಹೊರ ಪ್ರಪಂಚದಲ್ಲಿ ಪ್ರಕೃತಿಗೆ ಮೀರಿದ ಈ ಮೌಲ್ಯಗಳು ಆಧುನಿಕ ಮಾನವನ ಅರಿವಿಗೆ ಬಾರದು. ಧರ್ಮದ ಸಾರ ಮಾತ್ರ ಇದನ್ನು ಬೋಧಿಸುತ್ತದೆ. ವರ್ತಮಾನ ಕಾಲಕ್ಕನುಗುಣವಾಗಿ, ಅದು ಸಮಂಜಸವಾಗುವಂತೆ ಅರ್ಥವಿವರಣೆ ನೀಡಿ ವಿಖ್ಯಾತಗೊಳಿಸಿ ಅದನ್ನು 'ಅನುಷ್ಠಾನ ವೇದಾಂತ' ಎಂದು ಕರೆದು ಸ್ವಾಮಿ ವಿವೇಕಾನಂದರು ಈ ಮೌಲ್ಯಗಳನ್ನು ಪ್ರಚುರಪಡಿಸಿದರು. ಇದರ ಆಳ ಮತ್ತು ಅಗಲ ಗಮನಾರ್ಹವಾದುದು.

ಇವುಗಳ ಮೂಲ ಎಲ್ಲಿದೆ? ಈ ಎಲ್ಲ ಮೌಲ್ಯಗಳ ಕೇಂದ್ರ ನಮ್ಮೆಲ್ಲರ ಒಳಗಿರುವ ಆತ್ಮ, ನಿಜಮಾನವ, ದೈವೀಕ ಅಗ್ನಿಕಣ, ಈ ದಿವ್ಯಶಕ್ತಿಯನ್ನು ಪ್ರತಿ ಕಾರ್ಯದಲ್ಲೂ, ಪ್ರತಿಕ್ಷಣದಲ್ಲೂ ಪ್ರಕಟಗೊಳಿಸಿ ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. ಸ್ವಾಮೀಜಿ ಮುಂದುವರೆಸುತ್ತಾ, ಮಾನವನ ಸಾರಭೂತವಾದ ಸದ್ಗುಣವನ್ನೂ, ಅವನ ಬ್ರಹ್ಮಸ್ವರೂಪವನ್ನೂ ಪ್ರಕಟಗೊಳಿಸಿ ಎನ್ನುತ್ತಾರೆ. ಮಾನವನು ತನ್ನ ಅಸ್ತಿತ್ವದ ಎಲ್ಲ ಅವಯವಗಳ ಅಭಿವೃದ್ಧಿಗೆ ಸಹಾಯವಾಗುವ ಮೂಲತತ್ತ್ವಗಳನ್ನು ಸಹಜವಾಗಿಯೇ ಪಡೆದಿದ್ದಾನೆ. ಇದರ ಮೊದಲನೆಯ ಭಾಗದಲ್ಲಿ ಬಾಳಿನ ಭದ್ರ ಬುನಾದಿಯಾಗಿ ನಿಲ್ಲುವ ಅವನ ರೂಢಿಗಳು, ಅಭಿರುಚಿಗಳು, ಪ್ರಚೋದನೆಗಳು ಮತ್ತು ಜೀವನಶೈಲಿ ಇವುಗಳಿಗೆ ಪ್ರಭಾವ ಬೀರುವ ಕಾರ್ಯಗಳು ಇರುತ್ತವೆ. ಎರಡನೆಯ ಭಾಗದಲ್ಲಿ ನೈತಿಕ ಮೌಲ್ಯಗಳ ಮತ್ತು ನೈತಿಕ ಶಿಕ್ಷಣಗಳ ಪವಿತ್ರ ಹಾದಿಯಲ್ಲಿ ನಮ್ಮ ಇಚ್ಛೆಗಳಿಗೆ ಸೂಕ್ತ ತರಬೇತಿ ನೀಡುವ ವಿಚಾರ. ನಮ್ಮ ಭಾವನೆಗಳೇ ನಮ್ಮ ಇಚ್ಛೆಯನ್ನು ಪ್ರಮುಖವಾಗಿ ನಿಶ್ಚಯಿಸುವುದು ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಯಾವುದರಿಂದ ಮಾನವನ ಭಾವನೆಗಳು ಮತ್ತು ಆಕಾಂಕ್ಷೆಗಳು ಅವನು ಆರೋಹಣಗೈಯುವ ಏಣಿಯ ಮೂಲಕ ಬಹು ಎತ್ತರದ ಸ್ಥಾನಕ್ಕೆ ಕರೆದೊಯ್ಯುವುದೋ ಅಂತಹ ಸಮಯದಲ್ಲಿ ಪ್ರಾರ್ಥನೆ ಮತ್ತು ಧ್ಯಾನದ ವಿಶೇಷ ಆವಶ್ಯಕತೆ ಬರುತ್ತದೆ. ಇವೆಲ್ಲಕ್ಕೂ ಮಿಗಿಲಾಗಿ ಮಾನವ ಯಾವುದನ್ನು ಭಾವಿಸುತ್ತಾನೋ ಮತ್ತು ಬಯಸುತ್ತಾನೋ, ಅದರ ಭಾಗವಾಗಿ ಯಾವುದನ್ನು ಅವನು ಗ್ರಹಿಸುತ್ತಾನೋ ಮತ್ತು ವಿವೇಚಿಸುತ್ತಾನೋ, ಬಾಹ್ಯದಲ್ಲಿ ಗೋಚರಿಸುವ ಪ್ರಪಂಚ ಮಾತ್ರವಲ್ಲ ಅವನ ಅಂತರಂಗದ ಅಗೋಚರ ಪ್ರಪಂಚ ಇದರ ಉದ್ದೇಶವೂ ಸೇರಿ ತತ್ತ್ವಜ್ಞಾನ ಎಂದು ಕರೆಯಲ್ಪಡುತ್ತದೆ. ಸಂಪ್ರದಾಯ, ನೀತಿಬದ್ಧ ನಡತೆ, ಭಾವನಾತ್ಮಕ ವಿಚಾರ, ತರ್ಕಸಮ್ಮತ ವಿಚಾರ ಎಂಬ ಈ ನಾಲ್ಕು ಮೂಲವಸ್ತುಗಳು ಸೂಕ್ತ ಪ್ರಾಮುಖ್ಯತೆಯನ್ನು ಪಡೆದರೆ ಮಾತ್ರ ಅದು ಒಂದು ಸುಂದರ ಸಮತೋಲವುಳ್ಳ ಜೀವನಶೈಲಿ ಎನಿಸುತ್ತದೆ. ಹೀಗೆ ಮಾನವನ ಪೂರ್ಣ ಅಸ್ತಿತ್ವ ಹಾಗೂ ಅವನ ಎಲ್ಲ ಚಟುವಟಿಕೆಗಳು ಧರ್ಮದಲ್ಲೇ ಸಮಾವೇಶಗೊಂಡಿದೆ. ಇಲ್ಲಿ ಶ್ರೀರಾಮಕೃಷ್ಣರು ಕೊಡುವ ಒಂದು ಉದಾಹರಣೆಯು ಸ್ಮರಿಸಲು ಯೋಗ್ಯವಾಗಿದೆ : ಬಿಲ್ವವೃಕ್ಷದ ಒಂದು ಹಣ್ಣಿನ ಸರಿಯಾದ ತೂಕವನ್ನು ನಿರ್ಧರಿಸುವಾಗ, ಅದರ ಸಾರ ವಸ್ತು ಮೃದುವಾದ ತಿರುಳಾದರೂ, ಅದರ ತಿರುಳು, ಬೀಜ, ಸಿಪ್ಪೆ, ತೊಗಟೆ ಎಲ್ಲವನ್ನು ಒಟ್ಟು ಗಣನೆಗೆ ತೆಗೆದುಕೊಂಡು ಅದರ ಯೋಗ್ಯ ಬೆಲೆಯನ್ನು ನಿರ್ಧರಿಸಬೇಕು.

ಹೇಗೆ? ಯಾರಿಗಾದರೂ ನೀವು ಒಂದು ರಸ್ತೆಯನ್ನೋ, ಮನೆಯನ್ನೋ, ಮಾರ್ಗವನ್ನೋ ತೋರಿಸಬೇಕಾದರೆ, ನೀವು ನಿಮ್ಮ ಮನೆಯಿಂದ ಸ್ವಲ್ಪ ಹೊರಗೆಬಂದು ಸಹಾಯ ಮಾಡಬೇಕಾಗುತ್ತದೆ. ಇದು ನಿಮ್ಮ ಚಿಕ್ಕ ಶರೀರದಿಂದ ಮಾಡುವ 'ತ್ಯಾಗ'. ನೀವು ನಿಮ್ಮ ಶರೀರವೆಂಬ ಸೆರೆಮನೆಯಿಂದ ಹೊರಬಂದು ನಿಮ್ಮ ಸುತ್ತಲಿರುವ ಇತರರ ಬಗ್ಗೆ ಕಾಳಜಿ ವಹಿಸಿ, ನಾವೆಲ್ಲರೂ ಒಂದೇ ಎಂಬ ಭಾವನೆಯಿಂದ ಎಷ್ಟು ಹೆಚ್ಚು ಸಾಧ್ಯವೋ ಅಷ್ಟು ಅವರಿಗೆ ಸಹಾಯ ಮಾಡಿದಾಗ ಮೌಲ್ಯಗಳ ಉಗಮವಾಗುವುದು. ಈ ರೀತಿ ಮೌಲ್ಯವೆಂಬುದು ಒಬ್ಬ ವ್ಯಕ್ತಿಯ ಬಾಳಿನಲ್ಲೂ, ಸಮಾಜದಲ್ಲೂ ಸೃಜಿಸಲ್ಪಟ್ಟು ಸಂರಕ್ಷಿಸಲ್ಪಡುವುದು. ಇದು ಪ್ರವಚನ, ಶೋಧನೆ, ಉಪದೇಶಗಳಿಂದ ಸ್ವಲ್ಪಮಟ್ಟಿಗೆ ಸಂರಕ್ಷಿಸಲ್ಪಡಬಹುದು. ಸಂಕ್ಷಿಪ್ತವಾಗಿ ಹೇಳುವುದಾದರೆ ಯಾವುದು ಎಲ್ಲ ಜೀವಿಗಳಿಗೂ ತಕ್ಷಣಕ್ಕೆ ಮತ್ತು ದೀರ್ಘ ಕಾಲದವರೆಗೆ ಪ್ರಯೋಜನಕರವೋ ಅಂತಹ ಇಚ್ಛೆಯನ್ನು ಎಲ್ಲರ ಸಂಪೂರ್ಣ ಯೋಗಕ್ಷೇಮಕ್ಕಾಗಿ ಬಯಸಿದರೆ ಅದು ಪ್ರತಿಯಾಗಿ ಅಗತ್ಯಗಳೆಲ್ಲವನ್ನೂ ಪೂರೈಸುತ್ತದೆ. ಇದನ್ನು ಪುರುಷಾರ್ಥಗಳೆಂದು ಕರೆಯುತ್ತಾರೆ.

ಮೌಲ್ಯಗಳಲ್ಲಿ ಎರಡು ಬಗೆ:

೧. **ನೈಜ ಮೌಲ್ಯ**– ಸ್ವಾಭಾವಿಕತೆ, ಪೂರ್ಣತೆ, ಆವಶ್ಯಕತೆ ಇವುಗಳಿಲ್ಲದಿದ್ದರೆ ನಾವು ನಿರ್ಜೀವ ವಸ್ತುವಾಗುತ್ತೇವೆ.

೨. **ಪ್ರಾಸಂಗಿಕ ಮೌಲ್ಯ**– ನಮ್ಮ ಜೀವನದ ಭೌತಿಕ ಸೌಖ್ಯಗಳಿಗೆ, ವಿಚಾರ ಮತ್ತು ಜ್ಞಾನಗಳಿಗೆ, ಮೂಲತತ್ತ್ವ ಮತ್ತು ಆದರ್ಶಗಳ ಅರಿವನ್ನುಂಟುಮಾಡುವ ವಿಚಾರಗಳಿಗೆ ತಕ್ಷಣದ ಅಗತ್ಯಗಳನ್ನು ಪೂರೈಸುವ ಸಾಧನಗಳು.

ಆದರೆ ದುರ್ದೈವದಿಂದ ನಮ್ಮ ಜೀವನದಲ್ಲಿ 'ಮಾರ್ಗ'ವೇ ಮೇಲುಗೈಯಾಗಿ, ಅದೇ 'ಗುರಿ' ಎಂಬಂತಾಗಿ, ಅದೇ ಸರ್ವವೂ ಆಗಿಬಿಟ್ಟು, ವ್ಯಕ್ತಿತ್ವದಲ್ಲಿ ಬದಲಾವಣೆಯಾಗಬೇಕೆಂಬ ಪ್ರಮುಖ ವಿಚಾರವನ್ನೇ ಅದು ಮರೆಸಿಬಿಡುತ್ತದೆ. ನಮ್ಮನ್ನು ನಾವು ಆತ್ಮತುಲನೆ, ಆತ್ಮಾವಲೋಕನ ಮಾಡುವುದನ್ನು ಕಲಿತು, ವಸ್ತುನಿಷ್ಠೆ ಹಾಗೂ ವ್ಯಕ್ತಿನಿಷ್ಠೆಯಿಂದ ಮೌಲ್ಯವನ್ನು ಬೆಳೆಸಿ, 'ನಾವೇನಾಗಿದ್ದೇವೆ' ಎಂಬುದನ್ನು ಅಳೆಯದೆ 'ನಮ್ಮ ಬಳಿ ಎಷ್ಟು ಸ್ವತ್ತು ಇದೆ' ಎಂದು ಅಳೆಯುವ ವಿರೋಧಾಭಾಸವನ್ನು ಅದು ನಿವಾರಿಸಬೇಕು.

ಪ್ರಕೃತಿ ಇರುವುದು ಪುರುಷನಿಗಾಗಿ, ಪುರುಷ ಅಥವಾ ಆತ್ಮ ಪ್ರಕೃತಿಗಾಗಿ ಅಲ್ಲ ಎಂಬ ಸಾಂಖ್ಯದರ್ಶನದ ನೋಟವು ಈ ಸತ್ಯವನ್ನು ಅರಿಯಲು ಬೇಕಾದ ಆದರ್ಶದ ಆವಶ್ಯಕತೆಯನ್ನು ಸಮರ್ಥಿಸುತ್ತಿದೆ. ಹೇಗೆ ಚಿತ್ರಕಾರನೊಬ್ಬ ಚಿತ್ರವನ್ನು ಬರೆಯುವ ಮುನ್ನ ತನ್ನ ಮನಸ್ಸಿನಲ್ಲಿ ಅದರ ಒಂದು ಕಲ್ಪನೆಯನ್ನು ಮಾಡಿ

ಕೊಳ್ಳುವನೋ ಅದರಂತೆ ಮಾನವನಿಗೂ ತನ್ನ ನ್ಯೂನತೆ, ದುರ್ಬಲತೆ, ತನ್ನೆದುರಿನ ಆದರ್ಶಕ್ಕೆ ವಿರುದ್ಧವಾದ ಆಕರ್ಷಣೆ ಇವುಗಳನ್ನು ಕಂಡುಕೊಳ್ಳಲು 'ಲೋಹಶೋಧಕಯಂತ್ರ'ದಂತೆ ಒಂದು ದೊಡ್ಡ ಆದರ್ಶದ ಆವಶ್ಯಕತೆ ಇದೆ. ಆದರ್ಶಗಳು ಬಾಳಿಗೆ ಮೌಲ್ಯಗಳನ್ನು ಕಲ್ಪಿಸುತ್ತವೆ, ದೌರ್ಜನ್ಯ ಧ್ವಂಸಗಳನ್ನು ನಿವಾರಿಸಿ ಬಾಳಿಗೊಂದು ಅರ್ಥವನ್ನು ಕಲ್ಪಿಸುತ್ತವೆ. ಇದನ್ನು ನಾವು ಚೆನ್ನಾಗಿ ಅರ್ಥಮಾಡಿಕೊಂಡು, ನಮ್ಮ ಬಾಳನ್ನು ಮತ್ತೂ ಉತ್ತಮಗೊಳಿಸುವ ಉದ್ದೇಶವಿಟ್ಟುಕೊಂಡು ಉಪಯೋಗಿಸಿದರೆ ಬಾಳು ಧನ್ಯವಾಗುತ್ತದೆ. ಸನಾತನ ಧರ್ಮದ ವೈದಿಕ ಘೋಷಣೆಯನುಸಾರ ಬಾಳಿನ ನಿಜವಾದ ಉದ್ದೇಶವೇನು ಎಂಬುದರ ಬಗ್ಗೆ ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ: ''ಪ್ರತಿಯೊಂದು ಆತ್ಮನಲ್ಲಿಯೂ ದಿವ್ಯತೆ ಹುದುಗಿರುವುದು. ಈ ಸುಪ್ತವಾದ ದಿವ್ಯತೆಯನ್ನು ಬಾಹ್ಯ ಮತ್ತು ಆಂತರಿಕ ಪ್ರಕೃತಿಯ ನಿಗ್ರಹದಿಂದ ವ್ಯಕ್ತಪಡಿಸುವುದೇ ಜೀವನದ ಗುರಿ. ಇದನ್ನು ಕರ್ಮಯೋಗದಿಂದಾಗಲಿ, ಭಕ್ತಿಯೋಗದಿಂದಾಗಲಿ, ರಾಜಯೋಗದಿಂದಾಗಲಿ, ಜ್ಞಾನಯೋಗದಿಂದಾಗಲಿ, ಯಾವುದಾದರೂ ಒಂದು ಮಾರ್ಗದಿಂದ ಅಥವಾ ಎಲ್ಲ ಮಾರ್ಗಗಳ ಸಂಯೋಗದಿಂದ ಆಗಲಿ ಸಾಧಿಸಿ ಮುಕ್ತರಾಗಿ. ಇದೇ ಧರ್ಮದ ಸರ್ವಸ್ವ. ಸಿದ್ಧಾಂತ, ನಂಬಿಕೆ, ಬಾಹ್ಯಾಚಾರ, ಪವಿತ್ರ ಗ್ರಂಥ, ದೇವಸ್ಥಾನ, ವಿಗ್ರಹ — ಇವೆಲ್ಲಾ ಗೌಣ.''

ಎಲ್ಲ ಮೌಲ್ಯಗಳೂ ನಿಜವಾದ ಅಧ್ಯಾತ್ಮ ಎನ್ನುತ್ತದೆ ವೇದಾಂತ. ಲೋಕದಲ್ಲಿ ಅವುಗಳ ಪ್ರಭಾವ ದೈಹಿಕವಾಗಿ ಆಹಾರ, ವಸ್ತ್ರ, ನೆಲೆ, ರಕ್ಷಣೆಯ ಅಗತ್ಯಗಳಲ್ಲೂ; ಶೈಕ್ಷಣಿಕವಾಗಿ ನಾವು ಅರಸುವ, ಪ್ರಶ್ನಿಸುವ ಎಲ್ಲ ವಿಚಾರಗಳ ಅರ್ಥಗಳಲ್ಲಿ, ಹಾಗೂ ಕೇವಲ 'ಮಾಹಿತಿಗಳ ಮಣಭಾರ'ವಲ್ಲದೆ ನಮ್ಮ ಸಮಸ್ಯೆಗಳಿಗೆ ಕಂಡುಕೊಳ್ಳುವ ಪರಿಹಾರಗಳಲ್ಲಿಯೂ; ಸೌಂದರ್ಯದ ದೃಷ್ಟಿಯಿಂದ, ನಾವು ಬಳಸುವ ಮತ್ತು ತೊಡಗಿಕೊಳ್ಳುವ ಎಲ್ಲದರ ಮೌಲ್ಯಗಳಲ್ಲೂ; ಅಹಂಕಾರದ ದೃಷ್ಟಿಯಿಂದ ಪ್ರೀತಿ, ಹೊಗಳಿಕೆ, ಸ್ಥಾನ, ಮಾನ, ಅನುಕಂಪೆ, ಮನ್ನಣೆ ಮುಂತಾದುವುಗಳಲ್ಲೂ ಈ ಮೌಲ್ಯಗಳು ವ್ಯಕ್ತವಾಗುತ್ತವೆ. ಈ ಪಟ್ಟಿಗೆ ನಾವು ಇನ್ನೂ ಅನೇಕ ವಿಚಾರಗಳನ್ನು ಸೇರಿ ಸುತ್ತಾ ಹೋಗಬಹುದು.

ನೈತಿಕವಾಗಿ ಪರಿವರ್ತಿತನಾದವನು ಮಾತ್ರ ಶಿಕ್ಷಣದ ಶಕ್ತಿಯನ್ನು ಸರಿಯಾಗಿ ಉಪಯೋಗಿಸಬಲ್ಲ. (ಸ್ವಾಮಿ ವಿವೇಕಾನಂದರು ಶಿಕ್ಷಣ ಎಲ್ಲರೀತಿಯ ಅನಾರೋಗ್ಯಕ್ಕೂ ಸಿದ್ಧೌಷಧ ಎಂದು ಘೋಷಿಸಿದ್ದಾರೆ) becoming and being ಮೂಲಕವೇ ನಮ್ಮ ಸಹಜ ಸ್ಥಿತಿಯನ್ನು ಮರಳಿ ಪಡೆಯಬೇಕು ಮತ್ತು ನಮ್ಮ ಸ್ವಂತ ಶ್ರದ್ಧೆಯ ಮೂಲಕವೇ ಪರಿವರ್ತನೆಯನ್ನು ತರಬೇಕು, ಕೇವಲ ಮಾಡುವುದರಿಂದ ಅಥವಾ ಗಳಿಸುವುದರಿಂದಲ್ಲ. 'ಮಾಡು' ಎಂಬುದು 'ಇರು' ಎಂತಾಗಬೇಕು.

ಮಾನವನಿಗೆ ಅಗತ್ಯವಾಗಿ ಬೇಕಾಗಿರುವುದು ಸನಾತನಧರ್ಮರೀತ್ಯಾ, ಅಭ್ಯುದಯ ಮತ್ತು ನಿಃಶ್ರೇಯಸ ಇವೆರಡೂ ಇರುವ ಮೌಲ್ಯಗಳ ಶಿಕ್ಷಣಗ್ರಹಣವೇ ಹೊರತು, ಆಜ್ಞೆ, ಕಾನೂನು, ನಿಯಮ, ಶಾಸನಸಭೆಯ ಮಸೂದೆ, ವಿಶೇಷ ಕಾಯಿದೆಗಳು ಅಥವಾ ರಾಜ್ಯಶಾಸನ ಅಲ್ಲ. ಇವುಗಳು ಮನುಷ್ಯನನ್ನು ತಯಾರು ಮಾಡುವುದಿಲ್ಲ. ಅವುಗಳೇನಿದ್ದರೂ ಮಾನವನಿಗೆ ಬಾಳಿನ ಗುರಿಯನ್ನು ಸಾಧಿಸಲು ಸಹಾಯ ಮಾಡುವ ಮಜಲುಗಳು ಮಾತ್ರ.

ಮ್ಯಾಕ್ಸ್ ಮುಲ್ಲರ್ ಹೇಳುತ್ತಾರೆ: ಆತ್ಮ, ಅಂತರಾತ್ಮ, ದೇಹದೊಳಗಿರುವ ಪ್ರತ್ಯಕ್ಷ ಪುರುಷನನ್ನು ಅವಲೋಕಿಸಲು ಅಗತ್ಯವಾದ ದೂರದರ್ಶನಯಂತ್ರ, ಉಪನಿಷತ್ತಿನಲ್ಲಿ ಹುದುಗಿರುವ ವೇದಾಂತ ಚಿಂತನೆಗಳು ಅಥವಾ ಅವುಗಳ ಅಮರ ತತ್ತ್ವಗಳು.

ಸಂತರೊಬ್ಬರ ನುಡಿಯಂತೆ ಮಾನವನ ಜೀವನದ ಆರೋಹಣದ ಬಗ್ಗೆ ಮೇಲೆ ವಿವರಿಸಿದ ಎಲ್ಲ ಅಂಶಗಳನ್ನೂ ಸಾರಾಂಶ ರೂಪದಲ್ಲಿ ಹೀಗೆ ಹೇಳಬಹುದು:

೧೫ನೇ ವಯಸ್ಸಿನಲ್ಲಿ — ನಾನು ಬಹಳ ಗಂಭೀರವಾಗಿ ವ್ಯಾಸಂಗ ಮಾಡಲು ಪ್ರಾರಂಭಿಸಿದೆ.

೩೦ನೇ ವಯಸ್ಸಿನಲ್ಲಿ — ನನ್ನ ಗುಣಲಕ್ಷಣಗಳು ರೂಪಿಸಲ್ಪಟ್ಟವು.

೪೦ನೇ ವಯಸ್ಸಿನಲ್ಲಿ — ನನಗೆ ಜೀವನದಲ್ಲಿ ಯಾವುದೇ ಕಳವಳವಿರಲಿಲ್ಲ.

೫೦ನೇ ವಯಸ್ಸಿನಲ್ಲಿ — ದೈವೇಚ್ಛೆಯನ್ನು ಅರಿತೆ.

೬೦ನೇ ವಯಸ್ಸಿನಲ್ಲಿ — ನಾನು ಕೇಳಿದುದಾಗಲೀ, ಸನ್ನಿವೇಶಗಳಾಗಲೀ ನನ್ನನ್ನು ಕ್ಷೋಭೆಗೊಳಿಸದಂತಹ ಮನಸ್ಥೈರ್ಯವನ್ನು ಪಡೆದೆ.

೭೦ನೇ ವಯಸ್ಸಿನಲ್ಲಿ — ನನ್ನ ಚಿಂತನೆಗಳು ತಪ್ಪುಹೆಜ್ಜೆಯಿಡದೆ ಸಮಚಿತ್ತದಿಂದ ಸ್ವತಂತ್ರವಾಗಿ ಸಂಚರಿಸಲು ಬಿಡುತ್ತೇನೆ.

ಸನಾತನಧರ್ಮಕ್ಕೆ ಸಂಸ್ಥಾಪಕರಾರೂ ಇಲ್ಲ. ಅವು ವ್ಯಕ್ತಿ ಸಂಬಂಧರಹಿತವಾದವು. ಸತ್ಯವೇ ಇದಕ್ಕೆ ಪ್ರಮಾಣ. ಪ್ರತಿ ಮಾನವನ ಆಧ್ಯಾತ್ಮಿಕ ಅನುಭವಗಳೇ ಇದಕ್ಕೆ ಸಾಕ್ಷಿ, ಕೇವಲ ಋಷಿಗಳದು ಮಾತ್ರವಲ್ಲ. ಇದಕ್ಕನುಗುಣವಾಗಿ ಇಡೀ ಜೀವನವು ಯೋಜಿಸಲ್ಪಟ್ಟಿರುತ್ತದೆ ಹಾಗೂ ರಚಿಸಲ್ಪಟ್ಟಿರುತ್ತದೆ. ಈ ತತ್ತ್ವಗಳ ಮೇರೆಗೆ ಮಾನವನು ಹಂತಹಂತವಾಗಿ ಅಭಿವೃದ್ಧಿ ಹಾಗೂ ಪರಿಪೂರ್ಣತೆಯೆಡೆಗೆ ಪಯಣಗೈಯುತ್ತಾನೆ. ಈ ಪಯಣ ಕೆಳಹಂತದ ಸತ್ಯದಿಂದ ಮೇಲ್ಮಟ್ಟದ, ಅದಕ್ಕೂ ಮೇಲ್ಮಟ್ಟದ ಸತ್ಯದೆಡೆಗೆ ಮಾನವನ ಆರೋಹಣ. ಅದಕ್ಕೆ ಬೇಕಾದ ಶಿಕ್ಷಣ: **ಸತ್ಕರ್ಮ** – ಅಂದರೆ, ಉದಾತ್ತ ಕರ್ಮಗಳನ್ನಾಚರಿಸುವುದು ( ಹೆಚ್ಚು ಮಂದಿಗೆ ಅನುಕೂಲವಾಗುವಂತಹ ಕಾರ್ಯಗಳನ್ನೆಸಗುವುದು), **ಸದ್ಗುಣ** – ದೈವೀ ಸಂಪತ್ತಿಯಿಂದಿದ್ದು, ಉದಾತ್ತ ಮೌಲ್ಯಗಳನ್ನು ಬೆಳೆಸಿಕೊಳ್ಳುವುದು ಮತ್ತು **ಸದ್ಭಾವನೆ** – ಉದಾತ್ತ ದೃಷ್ಟಿಕೋನ ಮತ್ತು ಮನೋವೃತ್ತಿಯನ್ನು ವೃದ್ಧಿಪಡಿಸಿಕೊಳ್ಳುವುದು. ✵

*(ಮೈಸೂರು ಶ್ರೀರಾಮಕೃಷ್ಣಾಶ್ರಮದಲ್ಲಿ ೨೨.೦೪.೨೦೧೨ ರಂದು ನಡೆದ ಭಾರತೀಯ ಆಧ್ಯಾತ್ಮಿಕ ಸಮ್ಮೇಳನದಲ್ಲಿ ನೀಡಿದ ಪ್ರವಚನದ ಕನ್ನಡಾನುವಾದ)*

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೨೧

## ಶ್ರೀಮಾತೆ : ನಾನಾ ಭಾವಗಳಲ್ಲಿ

॥ ೪೦ ॥

'ಶ್ರೀರಾಮಕೃಷ್ಣ ಕಥಾಮೃತ'ದ ಯಾವುದೇ ಸಂಪುಟ ಪ್ರಕಟವಾಗಿ ಹೊರಬಂದರೂ ಮಾಸ್ಟರ್ ಮಹಾಶಯ ಶ್ರೀಮಾತೆಯವರ ಬಳಿಗೆ ಹೋಗಿ, ಮೊದಲು ಅವರಿಗೆ ಪುಸ್ತಕಗಳನ್ನು ಕೊಟ್ಟು ಹೋಗುತ್ತಿದ್ದರು. ಶ್ರೀಮಾತೆ ಪ್ರತಿದಿನ ಮಧ್ಯಾಹ್ನದ ಹೊತ್ತು ಯಾರಾದರೂ ಒಬ್ಬರು ಭಕ್ತೆಯರ ಮೂಲಕ ಅದನ್ನು ಓದಿಸಿ, ಕೇಳುತ್ತಿದ್ದರು. ಪ್ರತಿ ತಿಂಗಳು 'ಉದ್ಬೋಧನ' ಬಂದಾಗಲೂ ಅವರು ಹಾಗೆಯೇ ಮಾಡುತ್ತಿದ್ದರು.

॥ ೪೧ ॥

ಒಂದು ಸಲ ಒಂದು ಹಾಸ್ಯದ ಪ್ರಸಂಗ ಜರುಗಿತು. ಶ್ರೀಮಾತೆ ಯವರ ಫೋಟೋ (೧೫ x ೧೨ ಇಂಚು) ಸಾಹೇಬರ ಮನೆ ಯಿಂದ ತಯಾರಾಗಿ ಬಂತು. ಅದು ಹೇಗೆ ಬಂದಿದೆ ಎಂದು ನೋಡಲು ಒಂದನ್ನು ಅವರಿಗೆ ಕೊಟ್ಟರು. ಶ್ರೀಮಾತೆ ಎರಡೂ ಕೈಗಳನ್ನು ಚಾಚಿ ಅದನ್ನು ತೆಗೆದುಕೊಂಡು ತಮ್ಮ ಹಣೆಗೆ ಸ್ಪರ್ಶಿಸಿ ನೋಡುತ್ತ ನಿಂತರು. ಅವರು ಹೀಗೆ ಮಾಡುತ್ತಿದ್ದುದನ್ನು ನೋಡಿ ನಗು ತಡೆಯಲಾಗದೆ ತಡೆದುಕೊಂಡೆ. ಅನಂತರ ಅದನ್ನು ಮರಳಿಕೊಟ್ಟ ಮೇಲೆ ನಾನು ಕೇಳಿದೆ, ''ಆ ಚಿತ್ರಗಳು ಯಾರದಮ್ಮಾ?'' ಅದನ್ನು ಕೇಳಿದಾಗ ಅವರು ಚಿಕ್ಕ ಹುಡುಗಿಯಂತೆ ಉತ್ತರಿಸಿದರು: ''ಏಕೆ-ನನ್ನದು.'' ಅದನ್ನು ಕೇಳಿದ ನಾನು ಜೋರಾಗಿ ನಕ್ಕೆ. ಅವರು ಕೇಳಿದರು, ''ಯಾಕೆ ನಗುತ್ತಿದ್ದೀಯಾ?'' ನಾನೆಂದೆ, ''ಹಾಗಿದ್ದರೆ ನೀವು ಹಣೆಗೆ ಮುಟ್ಟಿಸಿಕೊಂಡರಲ್ಲ, ಏಕೆ?'' ಅವರೂ ಜೋರಾಗಿ ನನ್ನೊಂದಿಗೆ ನಗುತ್ತ ಕೊನೆಗೆ ಹೇಳಿದರು, ''ಅದರ ಒಳಗೂ ಠಾಕೂರ್ ಇದ್ದಾರೆ!''

॥ ೪೨ ॥

ಶ್ರೀಮಾತೆಯವರ ಒಬ್ಬ ಹಳೆಯ ಶಿಷ್ಯ ಆಜನ್ಮ ಬ್ರಹ್ಮಚಾರಿ ವ್ರತವನ್ನು ಕೈಗೊಂಡು, ಮನೆಯಲ್ಲೇ ಇರುತ್ತಿದ್ದ. ಅವನು ಒಂದು ಶಾಲೆಯಲ್ಲಿ ಅಧ್ಯಾಪಕನಾಗಿದ್ದ. ಈ ಘಟನೆ ನಡೆಯುವಾಗ ಶ್ರೀಮಾತೆ ಜಯರಾಮಬಾಟಿಯಲ್ಲಿ ಹಾಗೂ ಬೇಲೂರಿನ ಗಂಗಾ ತೀರದಲ್ಲಿದ್ದ ನೀಲಾಂಬರ ಮುಖ್ಯೋಪಾಧ್ಯಾಯನ ಉದ್ಯಾನದ



ಮನೆಯಲ್ಲಿರುತ್ತಿದ್ದರು. ಒಂದು ದಿನ ಸಾಯಂಕಾಲ ಅವನು ಬೇಲೂರು ಮಠಕ್ಕೆ ಬಂದು, ತನ್ನ ಗುರುಭಾಯಿಗಳನ್ನೆಲ್ಲ ಒಂದೆಡೆ ಒಟ್ಟು ಸೇರಿಸಿದ. ತಾನು ಯಾವುದೋ ಒಂದು ಕ್ಷಣದ ಉತ್ತೇಜನದಿಂದಾಗಿ ಅತ್ಯಂತ ಕೆಟ್ಟ ಕೆಲಸ ಮಾಡಿದ್ದುದಾಗಿಯೂ, ಅದು ಶಾಲೆಯ ಆಡಳಿತವರ್ಗ ಹಾಗೂ ಒಂದೆರಡು ಮಂದಿ ಶಿಷ್ಯರಿಂದ ಪಾಲಕರ ವರ್ಗದ ಗಮನಕ್ಕೆ ಬಂದಿದೆಯೆಂದೂ ಅವನು ಅವರಿಗೆ ತಿಳಿಸಿದ. ಆದ್ದರಿಂದ ಈಗ ತಾನೇನು ಮಾಡಬೇಕು, ಆ ವಿಷಯದಲ್ಲಿ ಅವರೆಲ್ಲರ ಅಭಿಪ್ರಾಯವೇನು ಎಂಬುದನ್ನು ತಿಳಿಯಬಯಸಿದ. ಅವರೆಲ್ಲರೂ ಏಕಾಭಿಪ್ರಾಯದಿಂದ ಹೇಳಿದರು, ತಾನು ಮಾಡಿದ ತಪ್ಪಿಗಾಗಿ ಯಾವುದೇ ತೊಂದರೆಯನ್ನಾದರೂ ಅವನು ಎದುರಿಸಲು ಸಿದ್ಧನಾಗಬೇಕು, ಹಾಗೂ ಅದರ ಪರಿಣಾಮದ

ಬಗ್ಗೆ ಏನನ್ನೂ ಆಲೋಚಿಸದೆ ಶ್ರೀಮಾತೆಗೆ ಎಲ್ಲ ವಿಷಯವನ್ನೂ ತಿಳಿಸಬೇಕು; ಹೊರಡುವ ಮೊದಲು ಶ್ರೀಮಾತೆಗೆ ಪ್ರಣಾಮ ಮಾಡಿ ಹೋಗಬೇಕು ಎಂದು. ಮರುದಿನ ಆತ ಸೂಕ್ತ ವಾದ ರೀತಿ ಅವೆಲ್ಲವನ್ನೂ ಮಾಡಿ, ಆಡಳಿತವರ್ಗದ ಮುಂದೆ ಹಾಜರಿದ್ದು, ತಾನು ಮಾಡಿದ ಅಪರಾಧವೆಲ್ಲವನ್ನೂ ಕಪಟತನವಿಲ್ಲದೆ ಒಪ್ಪಿಕೊಂಡ. ಅದಲ್ಲದೆ, ಎಲ್ಲ ಬಗೆಯ ಶಿಕ್ಷೆಯನ್ನೂ ಸ್ವೀಕರಿಸಲು ಸಿದ್ಧನಾಗಿರುವುದಾಗಿ ತಿಳಿಸಿದ. ಅದರ ಫಲವಾಗಿ ಆಡಳಿತ ವರ್ಗದವರು ಮುಂದೆಂದೂ ಹೀಗೆ ನಡೆಯದಂತೆ ಎಚ್ಚರಿಕೆ ನೀಡಿ ಬಿಟ್ಟುಬಿಟ್ಟರು. ವಿಪತ್ತಿನಿಂದ ಪಾರಾದ ಬಳಿಕ ಆತ ಬೇಲೂರು ಮಠಕ್ಕೆ ಹೋಗಿ, ತನ್ನ ಗುರುಭಾಯಿಗಳಿಗೆ ಪ್ರಣಾಮ, ಆಲಿಂಗನಗಳನ್ನು ಮಾಡಿ ಹೋದ.

॥ ೪೩ ॥

ಆಗಾಗ ಶ್ರೀಮಾತೆಯವರು ಭಕ್ತರ ದಾಂಪತ್ಯ ಕಲಹವನ್ನು ಸಂಧಾನ ಮಾಡುವ ಮೂಲಕವೂ ಬಳಲಬೇಕಾಗುತ್ತಿತ್ತು. ಒಂದು ಕುಟುಂಬದ ಗಂಡಹೆಂಡಿರು ಶ್ರೀರಾಮಕೃಷ್ಣರ ತುಂಬ ಹಳೆಯ ಭಕ್ತರೆಂದು ಗುರುತಿಸಲ್ಪಟ್ಟಿದ್ದರು. ಅವರ ನಡುವಿನ ಜಗಳವನ್ನು ಶ್ರೀರಾಮಕೃಷ್ಣರು ಸಂಧಾನ ಮಾಡಬೇಕಾಗುತ್ತಿತ್ತು. ಠಾಕೂರರ ದೇಹತ್ಯಾಗವಾದ ನಂತರ ಈ ಭಾರ ಶ್ರೀಮಾತೆಯವರ ಮೇಲೆ ಇತ್ತು. ಶ್ರೀಮಾತೆ ಈ ಕೆಲಸವನ್ನು ಹಲವು ಬಾರಿ ಮಾಡಿದ್ದನ್ನು ನಾವು ಕಂಡಿದ್ದೇವೆ, ಆದರೂ ಇಲ್ಲಿ ಅದನ್ನು ಕೊನೆಗೆ ಉಲ್ಲೇಖಿಸುತ್ತಿದ್ದೇನೆ.

ಒಂದು ದಿನ ಬೆಳಗಿನ ಹೊತ್ತು ಆ ಭಕ್ತೆ ಶ್ರೀಮಾತೆಯ ಬಳಿಗೆ ಬಂದು ಹೋದಳು. ಅವಳ ಗಂಡ ಬಂದರೆ ತಮಗೆ ತಿಳಿಸಬೇಕೆಂದು ಶ್ರೀಮಾತೆ ನಮಗೆ ಹೇಳಿದ್ದರು. ಹೀಗೆ ಮೂರು ನಾಲ್ಕು ದಿನ ಕಳೆಯಿತು, ಆತ ಬರಲಿಲ್ಲ. ಅವರ ಎರಡನೇ ಮಗ ತನ್ನ ತಾಯಿಯನ್ನು ಕರೆದುಕೊಂಡು ಹೋಗಲು ಬಂದಾಗ, ಶ್ರೀಮಾತೆ ಅವನಿಗೆ ತನ್ನ ತಂದೆಯನ್ನು ಕಳುಹಿಸಲು ಹೇಳಿದರು, ಅವನೊಂದಿಗೆ ಅವನ ತಾಯಿಯನ್ನು ಕಳುಹಿಸಲಿಲ್ಲ. ಕೊನೆಗೆ ಒಂದು ದಿನ ಆತ ಸಾಯಂಕಾಲ ಬಂದ. ಶ್ರೀಮಾತೆ ಅವನನ್ನು ಮೇಲಂತಸ್ತಿಗೆ ಬರಲು ಹೇಳಿ ಕಳುಹಿಸಿ, ನಮ್ಮ ಮೂಲಕ ಹೇಳಿದರು: ''ಈಗಲೂ ಈ ಹಿರಿಯ ವಯಸ್ಸಿನಲ್ಲಿ ಇದೆಲ್ಲ ಚಂದ ಕಾಣಿಸುತ್ತದೆಯೆ? (ಹಿರಿಯ ಮಗ) ಮೂರನೇ ಕ್ಲಾಸ್ ಪಾಸ್ ಆಗಿದ್ದಾನೆ. ಇವತ್ತಲ್ಲದಿದ್ದರೆ ನಾಳೆ ಮದುವೆಯಾಗುತ್ತಾನೆ. ಸೊಸೆ ಬಂದು, ಇವನ್ನೆಲ್ಲ ನೋಡಿ ಅದನ್ನೇ ಕಲಿಯುತ್ತಾಳೆ! ನಾನು ಹೇಳುತ್ತೇನೆ, ಇನ್ನು ಈ ರೀತಿ ಆಗಬಾರದು. ಆಗಲಾರದು ತಾನೆ?'' ಇನ್ನು ಹೀಗಾಗದು ಎಂದು ಅವನು ಒಪ್ಪಿ ಹೇಳಿದ. ಶ್ರೀಮಾತೆ ಮತ್ತೆ ಹೇಳಿದರು, ''ಆಕೆ ಮನೆಗೆ ಲಕ್ಷ್ಮಿ. ಅವಳಿಗೆ ಯಾವುದೇ ರೀತಿಯಲ್ಲಿ ಮಾನಸಿಕ ಕಷ್ಟ ನೀಡಬಾರದು. ಅವಳೇನು, ತನಗೋಸ್ಕರ ಎಲ್ಲವನ್ನು ಮಾಡುತ್ತಾಳೇನು? ಆದರೂ ಅವಳ ಕೈ ತುಸು ದೊಡ್ಡದು. ಅದರಿಂದ ಏನಾಯಿತು? ಭಕ್ತರ ಸಂಸಾರವಲ್ಲವೆ? ಅವಳನ್ನು ಚೆನ್ನಾಗಿ ನೋಡಿಕೊಳ್ಳಬೇಕು.'' ಅಂದು ಅವರಿಬ್ಬರೂ ಹೊರಟುಹೋದರು. ಅನಂತರ ಅವರ ಜಗಳವನ್ನು ನಾವು ನೋಡಲಿಲ್ಲ.

॥ ೪೪ ॥

ಶ್ರೀಮಾತೆಯವರು ಚಾದರ್ (ಉತ್ತರೀಯ) ದಿಂದ ದೇಹವನ್ನು ಆವರಿಸಿಕೊಂಡು ಗೃಹಸ್ಥಭಕ್ತರ ಪ್ರಣಾಮ ಸ್ವೀಕರಿಸುತ್ತಿದ್ದರು. ಭಕ್ತರೆಲ್ಲ ಒಬ್ಬೊಬ್ಬರಾಗಿ ಬಂದು, ಪ್ರಣಾಮ ಮಾಡಿ ಹೊರಟುಹೋದರು. ಆದರೆ ಒಬ್ಬ ಭಕ್ತ ಮಾತ್ರ ಪ್ರಣಾಮ ಮಾಡಲಿಲ್ಲ — ಬಂದು ಸುಮ್ಮನೆ ಕುಳಿತುಬಿಟ್ಟ. ಅವನಿಗೆ ಹಲವು ಬಾರಿ ಹೇಳಿದ ಮೇಲೂ ಅವನು ಪ್ರಣಾಮ ಮಾಡಲಿಲ್ಲ, ಏನೂ ಉತ್ತರಿಸಲಿಲ್ಲ. ಹಿಂದಿನಂತೆಯೇ ಸುಮ್ಮನೆ ಕುಳಿತುಬಿಟ್ಟ. ಅವನಿಗೆ ಏನು ಬೇಕು ಎಂದು ಕೇಳಿದರೂ ಅವನು ಉತ್ತರಿಸಲಿಲ್ಲ. ಆಗ ಅವನಿಗೆ ಹೇಳಲಾಯಿತು, ಶ್ರೀಮಾತೆಗೆ ಚಾದರ್‌ನಿಂದ ಆವೃತರಾಗಿ ನಿಂತಿರುವುದು ಕಷ್ಟವಾಗುತ್ತದೆ, ಹೀಗೆ ಅವರಿಗೆ ಕಷ್ಟಕೊಡುವುದು ಅವನ ಪಾಲಿಗೆ ಒಳ್ಳೆಯದಲ್ಲವೆಂದು. ಆಗ ಅವನು ಮಾತನಾಡಿದ: ''ಹ! ಕಲ್ಲು ಹೃದಯದ ಮಗಳೆ!'' ಆದರೆ ಅವನು ಅಲ್ಲಿಂದ ಏಳಲಿಲ್ಲ. ಶ್ರೀಮಾತೆ ಕೇಳಿದರು, ಮಂತ್ರದೀಕ್ಷೆ ಪಡೆದುಕೊಳ್ಳುವನೇ ಎಂದು. ಆಗ ಆತ ಉತ್ತರಿಸಿದ, ''ಹ! ಈಗ ಜೀವ ಬಂತು!'' ಕೋಣೆಯ ಹೊರಗೆ ಕುಳಿತುಕೊಳ್ಳುವಂತೆ ಅವನಿಗೆ ಶ್ರೀಮಾತೆ ಹೇಳಿದರು; ಅವನೂ ಅಂತೆಯೇ ಮಾಡಿದ. ಅಷ್ಟರಲ್ಲಿ ಶ್ರೀಮಾತೆ ಚಾದರ್ ಕಳಚಿ, ತಮ್ಮ ಆಸನದಲ್ಲಿ ಕುಳಿತರು. ಭಕ್ತನನ್ನು ಅಲ್ಲಿಗೆ ಕರೆದು ಅವನಿಗೆ ಮಂತ್ರದೀಕ್ಷೆ ನೀಡಿದರು. ಅಂದು ಅಲ್ಲೇ ಪ್ರಸಾದ ಸ್ವೀಕಾರ ಮಾಡಲು ಕೂಡ ಹೇಳಿದರು. ದೀಕ್ಷೆಯ ಬಳಿಕ ಆ ಭಕ್ತ ಕೆಳ ಅಂತಸ್ತಿಗೆ ಬಂದು, ತನ್ನ ಇಚ್ಛೆಯ ಪ್ರಕಾರ ಅಲ್ಲಿ ಕುಳಿತುಕೊಂಡ; ಯಾರೊಂದಿಗೂ ಯಾವ ಮಾತನ್ನೂ ಆಡಲಿಲ್ಲ. ಕೊನೆಗೆ ಮೌನವಾಗಿ ಪ್ರಸಾದ ಸ್ವೀಕರಿಸಿ ಹೊರಟುಹೋದ. ಬಹಳ ದಿನಗಳ ನಂತರ ಆತ ಬಂದಿದ್ದ, ಅಂದು ಅವನು ತುಂಬ ಉಲ್ಲಾಸದಿಂದಿದ್ದಂತೆ ಕಂಡು ಬಂದ. ಬೆಳಗಿನಿಂದ ಸಾಯಂಕಾಲದವರೆಗೂ ಅಲ್ಲೇ ಇದ್ದ. ಎಲ್ಲರೊಡನೆ ಆನಂದದಿಂದ ಒಡನಾಡಿದ.

॥ ೪೫ ॥

ಕೆಳಗೆ ನೀಡಲಾಗಿರುವ ಘಟನೆಯಿಂದ ಶ್ರೀಮಾತೆಯವರಿಗೆ ಹಣದ ಮೇಲೆ ಆಸಕ್ತಿಯಿತ್ತೇ, ಅನಾಸಕ್ತಿಯಿತ್ತೇ ಎಂಬುದು ತಿಳಿದುಬರುತ್ತದೆ. ಇಂಥ ಘಟನೆಗಳನ್ನು ನಾವು ಹಲವು ಬಾರಿ ನೋಡಿದ್ದೇವೆ; ಆದರೆ ಇಲ್ಲಿ ಒಂದನ್ನು ಮಾತ್ರ ಬರೆದಿದ್ದೇನೆ.

ಒಂದು ಸಲ ಜಯರಾಮಬಾಟಿಗೆ ಹೋಗಲು ಹೊರಡುತ್ತಿದ್ದಾಗ, ಅಲ್ಲಿನ ಒಬ್ಬಾಕೆ ಕಡುಬಡವಿ ಹೆಂಗಸಿಗೆ ನೀಡುವ ಸಲುವಾಗಿ ಒಂದು ಸೀರೆಯನ್ನು ಖರೀದಿಸಲು, ಶ್ರೀಮಾತೆ ನನ್ನ ಕೈಗೆ ಹತ್ತು ರೂಪಾಯಿ ನೋಟನ್ನು ಕೊಟ್ಟರು. ನಾವು ಎರಡೂವರೆ ರೂಪಾಯಿಗೆ ಬಟ್ಟೆ ಖರೀದಿಸಿ, ಉಳಿದ ಆರೂವರೆ ರೂಪಾಯಿ

ಯನ್ನು ಅವರಿಗೆ ಹಿಂದಿರುಗಿಸಹೊರಟರೆ, ಅವರು ಅದನ್ನು ತೆಗೆದುಕೊಳ್ಳದೆ, ತಾವು ಹತ್ತು ರೂಪಾಯಿ ನೋಟನ್ನು ಕೊಟ್ಟಿಲ್ಲವೆಂದೂ, ಐದು ರೂಪಾಯಿ ನೋಟನ್ನು ಕೊಟ್ಟಿದ್ದರೆಂದೂ ಹೇಳಿದರು. ಹೀಗಾಗಿ, ಇಷ್ಟೊಂದನ್ನು ಏಕೆ ಹಿಂದಿರುಗಿಸುತ್ತಿದ್ದೀರಿ? ಎಂದು ಕೇಳಿದರು. ಅವರು ಹತ್ತು ರೂಪಾಯಿ ನೋಟನ್ನೇ ಕೊಟ್ಟಿದ್ದುದಾಗಿ ಮತ್ತೆ ಮತ್ತೆ ನಾವು ಹೇಳಿಕೊಂಡರೂ ಪ್ರಯೋಜನವಾಗಲಿಲ್ಲ. ಆಗ ನಾವು ಕೇಳಿದೆವು, ''ನಿಮ್ಮ ಪೆಟ್ಟಿಗೆಯಲ್ಲಿ ಕೆಲವು ಹತ್ತು ರೂಪಾಯಿ ನೋಟುಗಳು ಹಾಗೂ ಐದು ರೂಪಾಯಿ ನೋಟುಗಳು ಇದ್ದವು, ನೆನಪಿದೆಯೆ?'' ಅವರೆಂದರು ''ಇಲ್ಲ.'' ''ಒಟ್ಟಾರೆ ಎಷ್ಟು ರೂಪಾಯಿ ನೋಟುಗಳಿದ್ದವು, ಅದಾದರೂ ನೆನಪಿನಲ್ಲಿದೆಯೆ?'' ''ಇಲ್ಲ'' ಎಂದರು. ''ಹಾಗಾದರೆ ತಿಳಿದುಕೊಳ್ಳಿ, ನಾನೇಕೆ ಹೆಚ್ಚು ಹಣ ಹಿಂದಿರುಗಿಸಬೇಕು? ಹೆಚ್ಚು ಹಣವನ್ನು ಎಲ್ಲಿಂದಾದರೂ ಪಡೆಯುತ್ತೇನೆ? ಯಾರ ಬಳಿಯಿಂದಾದರೂ ನಾನು ಪಡೆದಿದ್ದರೆ, ನಾನು ಹಾಗೆ ಹೇಳಿಯೇ ನಿಮಗೆ ಕೊಡುತ್ತಿದ್ದೆ. ಈಗೇಕೆ ಕೊಡಲಿ?'' ಇಷ್ಟನ್ನು ಹೇಳಿದ ಮೇಲೆ ಅವರು ಅದನ್ನು ಮರಳಿ ತೆಗೆದುಕೊಂಡರು.

॥ ೪೬ ॥

ತನ್ನ ಮಗನ ರೋಗ ವಾಸಿಯಾಗಲು ಶ್ರೀಮಾತೆಯವರ ಪಾದೋದಕವನ್ನು ತೆಗೆದುಕೊಂಡು ಹೋಗಲು ಶಿರೋಮಣಿಪುರದಿಂದ ಒಬ್ಬಾಕೆ ಹೆಂಗಸು ಜಯರಾಮಬಾಟಿಗೆ ಬಂದಿದ್ದಳು. ಇದು ಬ್ರಹ್ಮಚಾರಿ ಹರೇಂದ್ರನಾಥನ ಮೂಲಕ ತಿಳಿದು, ನಾನು ಶ್ರೀಮಾತೆಯವರ ಕೋಣೆಗೆ ಹೋಗಿ ನೋಡಿದಾಗ, ಒಬ್ಬಾಕೆ ಹೆಂಗಸು ಒಂದು ಪಾತ್ರೆಯಲ್ಲಿ ನೀರು ತಂದಿದ್ದಳು. ಅದರಲ್ಲಿ ಶ್ರೀಮಾತೆ ತಮ್ಮ ಬಲಗಾಲಿನ ಹೆಬ್ಬೆರಳನ್ನು ಮುಳುಗಿಸಲು ಮುಂದಾಗಿದ್ದರು. ತಕ್ಷಣವೇ ಅವರ ಕಾಲುಗಳನ್ನು ಹಿಡಿದು ಹಾಗೆ ಮಾಡದಂತೆ ತಡೆದು ಆ ಹೆಂಗಸಿಗೆ ಹೇಳಿದೆ: ''ನೋಡಮ್ಮಾ, ನಿನ್ನ ಮಗುವಿಗೆ ಚಿಕಿತ್ಸೆ ಮಾಡುತ್ತೀಯೋ, ಅಥವಾ ಇನ್ನೇನಾದರೂ ಮಾಡುತ್ತೀಯೋ — ಶ್ರೀಮಾತೆಯವರ ಪಾದತೊಳೆದ ನೀರು ಮಾತ್ರ ನಿನಗೆ ಸಿಗದು.'' ಪಕ್ಕದಲ್ಲೇ ಭವ ಕೂಡ ಇದ್ದರು, ಅವರೂ ನಿಷೇಧಿಸುತ್ತಾ ಶ್ರೀಮಾತೆಗೆ ಹೇಳಿದರು, ''ಬೇಡಮ್ಮಾ, ಕೊಡಬೇಡಿ. ಮೊದಲನೆಯದಾಗಿ ನೀವು ವಾತ ಅನುಭವಿಸುತ್ತಿದ್ದೀರಿ. ನಿಮಗೆ ಇನ್ನಷ್ಟು ಅನಾರೋಗ್ಯವುಂಟಾದೀತು. ಕರ್ತಾಭಜರು ಹೀಗೆ ಹೆಬ್ಬೆರಳನ್ನು ಸೆಳೆಯುತ್ತಾರೆ.'' ಶ್ರೀಮಾತೆ ಸುಮ್ಮನಾಗಿ ಆ ಹೆಂಗಸಿಗೆ ಹೇಳಿದರು, ''ನೀನೇಕಮ್ಮಾ ಸುಮ್ಮನೆ ಯಾರಿಗೂ ಹೇಳದೆ ಬರಬಾರದಾಗಿತ್ತು? ಹಾಗೆ ಬಂದಿದ್ದರೆ ನಿನಗಿದು ಸಿಗುತ್ತಿತ್ತು. ಈಗ ನನ್ನ ಮಕ್ಕಳಿಗೆ ಗೊತ್ತಾಗಿ ಬಿಟ್ಟಿದೆ. ಅವರು ಒಪ್ಪದೆ ಏನೂ ಮಾಡಲಾಗದು. ಹಳ್ಳಿಗೆ ಹೋಗು, ಅಲ್ಲಿ ತುಂಬಾ ಮಂದಿ ಬ್ರಾಹ್ಮಣರಿದ್ದಾರೆ. ಯಾರ ಬಳಿಗಾದರೂ ಹೋಗಿ, ಅವರಿಂದ ಪಡೆದುಕೋ — ನಾನು ಹೇಳುತ್ತೇನೆ, ನಿನ್ನ ಮಗುವಿಗೆ ವಾಸಿಯಾಗುತ್ತದೆ.''

॥ ೪೭ ॥

ಇನ್ನೊಂದು ಬಾರಿ ವಿಷ್ಣುಪುರದಲ್ಲಿ ಹುಳಗಳ ಬಾಧೆಯಿಂದ ಕೂಡಿದ್ದ ಛತ್ರವೊಂದರಲ್ಲಿ ಶರೀರವೆಲ್ಲ ಬಿಳಿಯಾಗಿಬಿಟ್ಟಿದ್ದ ಒಬ್ಬಾತ ಕೈಯಲ್ಲಿ ಮಣ್ಣು ತುಂಬಿಕೊಂಡು ಬಂದ. ಶ್ರೀಮಾತೆಯರ ಪಾದಗಳ ಧೂಳಿಯನ್ನು ಮಾಡಿಸಿ, ಕೊಂಡುಹೋಗಬೇಕೆಂಬುದು ಅವನ ಉದ್ದೇಶ. ಅವನನ್ನು ತಡೆದು, ಅದನ್ನು ಕೊಡಲಾಗದು ಎಂದಾಗ ಶ್ರೀಮಾತೆ ಅವನಿಗೆ ಹೇಳಿದರು: ''ಈ ನನ್ನ ಮಗು ಅದನ್ನು ಕೊಡಲು ಬಿಡಲಾರ, ನಾನೇನು ಮಾಡಲಿ ಹೇಳು, ಮಗೂ. ನೀನು ಹೋಗು, ಮೃಣ್ಮಯಿಯ ಮೈದಾನದಲ್ಲಿ ಹರಕೆ ಸಲ್ಲಿಸು. ರೋಗ ವಾಸಿಯಾದೀತು.''

॥ ೪೮ ॥

ಜಯರಾಮಬಾಟಿಯಲ್ಲಿ ಮಾವಂದಿರ ಬಳಿ ಒಬ್ಬ ಗೊಲ್ಲನಿದ್ದ. ಒಮ್ಮೊಮ್ಮೆ ಅವನು ಕತ್ತಲಾದ ಮೇಲೆ ಕೈಯಲ್ಲೊಂದು ಬೆತ್ತವನ್ನು ಹಿಡಿದುಕೊಂಡು, ತನ್ನ ಬೆನ್ನಿಗೇ ಹೊಡೆದುಕೊಳ್ಳುತ್ತ ನರ್ತಿಸುತ್ತಿದ್ದ. 'ಹಾಪು' ಆಡುತ್ತಿದ್ದ. ದನಿಯೆತ್ತಿ, ''ಅಮ್ಮಾ, ಮದ್ವೆ ಮಾಡಿಲ್ವಲ್ಲಾ'' ಎಂದೆಲ್ಲ ಹಾಡುತ್ತಿದ್ದ. ಶ್ರೀಮಾತೆ ಒಂದು ದಿನ ಅವನನ್ನು ನೋಡಿ ಹೇಳಿದರು, ''ಈಗ ನೀನು 'ಮದುವೆ ಮಾಡಿಲ್ಲ ಮದುವೆ ಮಾಡಿಲ್ಲ' ಅನ್ನುತ್ತೀಯಾ. ಮದುವೆಯ ಸುಖ ಏನಂತ ಆಮೇಲೆ ಗೊತ್ತಾದೀತು'' ಎಂದರು. ನಮ್ಮತ್ತ ತಿರುಗಿ ಅವರು ಕೇಳಿದರು, ''ಠಾಕೂರರ ಈ ಮಾತು ನೆನಪಿದೆ ತಾನೆ?'' ನಾನೆಂದೆ, ''ಹೌದಮ್ಮಾ. ಠಾಕೂರರ ಅಣ್ಣನಾದರೋ ತಮ್ಮ ಹೆಂಡತಿಯ ಮೈಮೇಲೆ ಕೈಮಾಡಬಲ್ಲರು, ಆದರೆ ಹೆಂಡತಿ ಅವರ ಕಚ್ಚೆಯ ಗಂಟನ್ನು ಹಿಡದು ದರದರನೆ ಎಳೆದೊಯ್ಯುತ್ತಾಳೆ. ಆತ ಎರೆಹುಳುವಿನಂತೆ ಹಿಂದೆಯೇ ಹೋಗುತ್ತಾನೆ.'' ಶ್ರೀಮಾತೆ, ''ಹೌದು, ಅದೇ ರೀತಿ ಆಗುತ್ತದೆ'' ಎಂದರು.

॥ ೪೯ ॥

ಮಂತ್ರದೀಕ್ಷೆಯಾದ ನಂತರ ಶ್ರೀಮಾತೆ ಒಬ್ಬ ಶಿಷ್ಯನಿಗೆ ರುದ್ರಾಕ್ಷಿ ಮಾಲೆಯನ್ನು ತರಲು ಹೋದರು. ಆ ಮಾಲೆಯನ್ನು ಅವರ ಶಿಷ್ಯಂದಿರು ಎರಡು ಬಗೆಯಲ್ಲಿ ಬಳಸುತ್ತಿದ್ದರು. ಕೆಲವರು ೧೦೮ ಮಣಿಗಳ ಮಾಲೆಯನ್ನು, ಕೆಲವರು ೫೪ ಮಣಿಗಳ ಮಾಲೆಯನ್ನು ಪೋಣಿಸಿ ಒಯ್ಯುತ್ತಿದ್ದರು. ಆ ಮಾಲೆಯನ್ನು ಶ್ರೀಮಾತೆಯವರ ಬಳಿಗೆ ತಂದುಕೊಟ್ಟರೆ, ಅವರು ಅದಕ್ಕೆ ಗಂಗಾಜಲದಲ್ಲಿ ಸ್ನಾನ ಮಾಡಿಸಿ, ಶ್ರೀಗಂಧದಲ್ಲಿ ಮುಳುಗಿಸಿ, ಠಾಕೂರರ (ಭಾವಚಿತ್ರದ) ಪಾದಪದ್ಮಗಳಿಗೆ ಸ್ಪರ್ಶ ಮಾಡಿ, ಅನಂತರ ತಾವೇ ಜಪ ಮಾಡಿಕೊಳ್ಳುತ್ತಿದ್ದರು. ಜಪ-ಧ್ಯಾನ ಮಾಡಲು ಹೇಳಿ, ಯಾರಾದರೂ ಶಿಷ್ಯನಿಗೆ ಯಾವುದೇ ಕಾರಣಕ್ಕೆ ಹಾಗೆ ಮಾಡಲು ಸಾಧ್ಯವಾಗದೆ ಹೋದರೆ, ಬೆಳಿಗ್ಗೆ ಹಾಗೂ ಸಾಯಂಕಾಲ ಸ್ಮರಣ-ಮನನ ಮಾಡಲು ಶ್ರೀಮಾತೆ ಹೇಳುತ್ತಿದ್ದರು. ಅದಕ್ಕೂ ಸಾಧ್ಯ

ವಾಗದಿದ್ದರೆ, ದಿನದ ಕೊನೆಯಲ್ಲಿ ಒಂದು ಬಾರಿ ಮಾತ್ರ ಸ್ಮರಣೆ ಮಾಡಿದರೂ ಸಾಕು ಎನ್ನುತ್ತಿದ್ದರು. ಇದು ಸಾಧಾರಣ ನಿಯಮ ವಲ್ಲ ; ಅರ್ಹತೆ ಅಥವಾ ಅಧಿಕಾರ ಭೇದಕ್ಕೆ, ಪಾತ್ರವಿಶೇಷತೆಗೆ ಅನುಗುಣವಾಗಿ ಹೇಳುತ್ತಿದ್ದುದು.

॥ ೫೦ ॥

(ವೃದ್ಧ) ಗೋಪಾಲ-ದಾದಾ ಅವರ ದೇಹತ್ಯಾಗವಾದ ನಂತರ ಬಹಳ ಹೊತ್ತು ಶ್ರೀಮಾತೆಯವರೊಂದಿಗೆ ಮಾತುಕತೆ ನಡೆಯಿತು. ನಾನು ಕೇಳಿದೆ: ''ಸ್ವಾಮೀಜಿ ಹೇಳುತ್ತಿದ್ದರು 'ಅವತಾರ್ ಕಪಾಲಮೋಚನ್' ಅಂತ. ಒಂದೆಡೆ ಕಪಾಲ(ದ ಬರಹ) ನಡೆಯುತ್ತಿದೆ, ಅತ್ತ ಅವತಾರಪುರುಷ ಒಂದು ಸಲ ಕೈಯಿಂದ (ಆ ಬರಹವನ್ನು)ಒರೆಸಿ, ಇನ್ನೊಂದೆಡೆಗೆ ಅದಕ್ಕೆ ಚಾಲನೆ ಮಾಡಬಲ್ಲ. ನೀವು ನಿಜವಾಗಿಯೂ ಹೀಗೆ ಮಾಡಬಲ್ಲಿರಾ? ಹಾಗೆ ಮಾಡಿಯೂ ಇದ್ದೀರಾ?'' ತೇಲುಮಾತುಗಳಿಂದ ಇದನ್ನು ಮರೆಮಾಚಲು ಮಾಡಿದ ಯತ್ನವೆಲ್ಲ ವ್ಯರ್ಥವಾದ ಮೇಲೆ ಅವರು ಅದಕ್ಕೆ ಉತ್ತರ ಕೊಟ್ಟರು: ''ಠಾಕೂರ್ ಯಾವುದನ್ನೂ ಧ್ವಂಸ ಮಾಡಲು ಬರಲಿಲ್ಲ. ಜನ ನಾಟಕವನ್ನೇ ನೋಡಬಯಸುತ್ತಾರೆ, ಅದನ್ನೇ ನೋಡುತ್ತಾರೆ. ಜಗಾಯ್-ಮಾಧಾಯ್ ಅವರಂತೆ ಭಕ್ತರು ಯಾರಿದ್ದಾರೆ? ಗಿರೀಶ್ ಬಾಬುವಿನಂಥ ಭಕ್ತರು ಯಾರು? ಅವರು ಆ ಭಾವದಿಂದಲೇ ಬರುತ್ತಾರೆ. ನೋಡಿಲ್ಲವೆ, ದೀಪದ ಹುಳಗಳು ಬೆಳಕಿನ ನಾಲ್ಕೂ ದಿಕ್ಕುಗಳಲ್ಲಿ ಬಗೆಬಗೆಯಾಗಿ ಹಾರಾಡಿ, ಕೊನೆಗೆ ಬೆಳಕಿನಲ್ಲೇ ಒಂದಾಗಿ ಬಿಡುತ್ತವೆ.'' ''ಅಂದರೆ ನೀವು ಏನು ಹೇಳಬಯಸುತ್ತಿದ್ದೀರಿ ಅಂದರೆ, ಅವರೆಲ್ಲ ಅವತಾರದೊಂದಿಗೇ ಮತ್ತೆ ಮತ್ತೆ ಬರುತ್ತಾರೆ; ಥಿಯೇಟರಿನ ಪಾತ್ರಗಳಂತೆ ಅಭಿನಯ ಮಾಡಿ ಹೊರಟು ಹೋಗುತ್ತಾರೆ - ಎಂದೆ?'' ''ಹೌದಪ್ಪಾ, ಅದು ಹಾಗೇ.'' ''ಅಂದರೆ ನಮ್ಮ ಹಾಗೆ ಸಾಮಾನ್ಯರ ದೆಸೆಯೇನು?'' ''ಠಾಕೂರರ ಮಾತನ್ನು ಓದಲಿಲ್ಲವೆ? ಹೊಟ್ಟೆ ಸ್ಪರ್ಶವಾದರೆ ಆಗಿ ಬಿಟ್ಟಿತು. ನಗು, ಆಟವಾಡು, ನರ್ತಿಸು, ಅಳು, ಏನೇ ಮಾಡು - ಹೊಟ್ಟೆ ಸ್ಪರ್ಶವಾಗಿದೆ - ಜುಟ್ಟು ಕಟ್ಟಲ್ಪಟ್ಟಿದೆ. ಇನ್ನೆಲ್ಲಿಗೆ ಹೋಗುತ್ತೀರಿ?'' ''ಹಾಗಾದರೆ ನಮಗೇನೂ ಚಿಂತೆ ಬೇಡವೆ?'' ''ಬೇಡ, ಮಗೂ ಬೇಡ. ನಿಮಗಿನ್ನೇಕೆ ಚಿಂತೆ? ಠಾಕೂರರು ನಿಮ್ಮ ಭಾರ ಹೊತ್ತಿದ್ದಾರೆ. ಆತನೋ ಈತನೋ ನಿಮ್ಮನ್ನು ಹಿಡಿದುಕೊಂಡಿದ್ದಾನೇನು?'' ''ಅದು ನಿಮಗೇ ಗೊತ್ತಮ್ಮಾ.'' ''ನೀನೇ ನೋಡುವೆ.''

॥ ೫೧ ॥

ಮಹಾಷ್ಟಮಿಯ ದಿನ ಬೆಳಗಿನಿಂದಲೇ ಶ್ರೀಮಾತೆಯವರಿಗೆ ಬಿಡುವಿಲ್ಲ. ಸ್ತ್ರೀ ಹಾಗೂ ಪುರುಷ ಭಕ್ತರು ಗುಂಪುಗುಂಪಾಗಿ ಬರುತ್ತಿದ್ದಾರೆ. ಕೆಲವರು ಪ್ರಣಾಮ ಮಾಡಲು, ಕೆಲವರು ಪೂಜೆ ಮಾಡಲು ಹೋಗುತ್ತಿದ್ದಾರೆ. ಶ್ರೀಮಾತೆ ನಿಂತುಕೊಂಡಿದ್ದಾರೆ. ಹೀಗೇ ನಡೆಯುತ್ತ, ಗಂಟೆ ಒಂಬತ್ತು ಬಾರಿಸಿತು. ಆಗ ಅವರು, ''ಇನ್ನೀಗ ಬರಲು ಬಿಡಬೇಡ, ಕೆಳಗೆ ಕುಳ್ಳಿರಿಸಿ ಬಿಡು. ನಾನು ಪೂಜೆ ಮಾಡಿ ಮುಗಿಸಿಲ್ಲ'' ಎಂದರು. ಹಾಗೆಂದ ಅವರು, ಬಚ್ಚಲುಮನೆಗೆ ಹೋದರು. ಕೆಳಂತಸ್ತಿಗೆ ಹೋಗಿ ನೋಡಿದೆ, ಅಲ್ಲಿ ಒಬ್ಬ ಮಾತ್ರ ನಿಂತಿದ್ದ. ಆತ ಶ್ರೀಮಾತೆಯವರ ಶಿಷ್ಯ - ಕಾಳೀಪದ ವಂದೋಪಾಧ್ಯಾಯ (ಅಧ್ಯಾಪಕ ಗಂಗಾಧರ ವಂದ್ಯೋಪಾಧ್ಯಾಯರ ಮಗ) ಕೈಯಲ್ಲಿ ಹೂಗಳನ್ನು ಹಿಡಿದುಕೊಂಡು ಕಾಯುತ್ತಿದ್ದಾನೆ. ಶ್ರೀಮಾತೆ ಬಚ್ಚಲು ಮನೆಯಿಂದ ಹೊರಬಂದಾಗ ಅವರಿಗೆ ಈ ವಿಷಯವನ್ನು ತಿಳಿಸಿದೆ. ಅವರೆಂದರು, ''ಅವನು ಒಬ್ಬನೇ ತಾನೆ? ಅವನನ್ನು ತಕ್ಷಣ ಬಂದು ಎಲ್ಲ ಮುಗಿಸಿಬಿಡಲು ಹೇಳು.'' ಕಾಳೀಪದನ ಕೈಯಲ್ಲಿ ಆಗತಾನೇ ಅರಳಿದ ತಾವರೆ ಹಾಗೂ ಕೆಂಪು ದಾಸವಾಳ ಹೂಗಳನ್ನು ಕಂಡು ಶ್ರೀಮಾತೆ ಆನಂದಗೊಂಡು, ಎರಡೂ ಕೈಗಳನ್ನು ಜೋಡಿಸಿ, ''ಅಬ್ಬಾ! ಎಷ್ಟೊಂದು ಚೆನ್ನಾಗಿವೆ ಹೂಗಳು! ಸ್ವಲ್ಪ ನನಗೂ ಕೊಡು - ಠಾಕೂರರಿಗೆ ನೀಡುತ್ತೇನೆ. ಇಂದು ಮಹಾಷ್ಟಮಿ'' ಎಂದರು. ಕಾಳೀಪದ ಎಲ್ಲವನ್ನೂ ಕೊಟ್ಟ. ಶ್ರೀಮಾತೆ ನಕ್ಕು, ''ಇಲ್ಲ, ಎಲ್ಲವನ್ನೂ ಕೊಡಬೇಡ. ನೀನು ಮತ್ತೆ ಪೂಜೆ ಮಾಡುವೆ'' ಎಂದರು. ಹೀಗೆಂದು, ಕೆಲವು ಹೂಗಳನ್ನು ಒಯ್ದು, ಠಾಕೂರರ ಪೂಜೆಗೆ ಹೂವಿನ ಪಾತ್ರೆಯಲ್ಲಿಟ್ಟರು, ತಾವೇ ಪೂಜೆ ಮಾಡುವುದಕ್ಕಾಗಿ. ಉಳಿದವನ್ನು ಕಾಳೀಪದ ಶ್ರೀಮಾತೆಗೆ ಪೂಜೆ ಮಾಡಲು ಉಪಯೋಗಿಸಿದ. ಶ್ರೀಮಾತೆ ಅವನಿಗೆ, ''ಕೆಳ ಅಂತಸ್ತಿನಲ್ಲಿ ಕುಳಿತುಕೋ. ಪೂಜೆ ಮುಗಿಸಿ ಪ್ರಸಾದ ಕಳುಹಿಸಿಕೊಡುತ್ತೇನೆ'' ಎಂದರು.

॥ ೫೨ ॥

ಬೇಲೂರು ಮಠದಿಂದ (ವೃದ್ಧ) ಗೋಪಾಲ್-ದಾದಾ ಒಂದು ದಿನ ಶ್ರೀಮಾತೆಗೆ ಪ್ರಣಾಮ ಮಾಡಲು ಬಂದರು. ಪ್ರಣಾಮ ಮಾಡಿದ ಮೇಲೆ ಪ್ರಸಾದ ಸ್ವೀಕರಿಸುತ್ತ, ಶ್ರೀಮಾತೆಯವರ ಕಾಲಿನ ವಾತ ಹೇಗಿದೆಯೆಂದು ಕೇಳಿದರು. ಅದಕ್ಕೆ ಶ್ರೀಮಾತೆ, ''ಅದು ಇನ್ನು ಮೇಲೆ ವಾಸಿಯಾಗದು. ನನ್ನ ಜೊತೆಗೇ ಸಾಥಿಯಾಗಿದೆ. ನೀನು ಹೇಗಿದ್ದೀಯಾ?'' ಎಂದರು. ಅದಕ್ಕೆ ಗೋಪಾಲ್ ದಾದಾ, ''ನನಗೂ ವಾತದಿಂದ ಕಷ್ಟವಾಗಿದೆ. ಆದರೂ ಸಹಿಸಿಕೊಳ್ಳುತ್ತಿದ್ದೇನೆ. ಮಕ್ಕಳು ಯಾರೂ ನೋಡಿಕೊಳ್ಳುತ್ತಿಲ್ಲ. ಆದರೂ ಬೇಲೂರು ಮಠದ ಜಮೀನಿನಲ್ಲಿ ಏನು ಬೆಳೆಯುತ್ತದೋ, ಅಷ್ಟು ತರಕಾರಿ, ಗಿಡ ಬೆಳೆಸುತ್ತಿದ್ದೇನೆ - ಬದನೆ, ಬಾಳೆಕಾಯಿ ಎಲ್ಲ ಬೆಳೆಯುತ್ತಿವೆ. ಹೆಚ್ಚೇನೂ ತರಕಾರಿ ಖರೀದಿ ಮಾಡಬೇಕಾಗಿಲ್ಲ. ನಿಮಗೆ ಇಲ್ಲಿಗೆ ನಡುನಡುವೆ ಕಳುಹಿಸಿಕೊಡುತ್ತಿದ್ದಾರೆ ಅಂತ ಕಾಣುತ್ತದೆ.'' ಶ್ರೀಮಾತೆ ಹೇಳಿದರು, ''ಹೌದು ಮಗೂ. ನೀನು ಹಳೇಕಾಲದ ಮಂದಿ. ನಿನಗೆ ಇನ್ನು ಹುಡುಗರ ಹಾಗೆ ಕೆಲಸ ಮಾಡಲು ಸಾಧ್ಯವಾಗದು. ಬೇಲೂರು ಮಠವಂತೂ ಒಂದು ಸಂಸಾರ — ಊಟ ಇತ್ಯಾದಿಗಳಂತೂ ಇದ್ದೇ ಇವೆ. ನಿನಗೆ ಹೇಗೆ ಅದೆಲ್ಲ ಮಾಡಲು ಸಾಧ್ಯವಾದೀತು? ಆದ ಕಾರಣ ಚೆನ್ನಾಗಿ ನೋಡಿಕೊಂಡಿರು.'' *(ಮುಂದುವರಿಯುವುದು)*



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

**ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ** 　　 **ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ**

## ಭಾಗ ೨೨

೧೯೧೪ನೇ ವರ್ಷ ಬಂದೇ ಬಿಟ್ಟಿತು. ಅಂದುಕೊಂಡಿದ್ದಂತೆ ವಿರಜಾನಂದರಿಗೆ ಜನವರಿ ೧ ರಿಂದ ಸ್ವಾಮೀಜಿಯವರ ಪುಸ್ತಕಕ್ಕೆ ಕೈಹಾಕಲಾಗಲಿಲ್ಲ. ಫೆಬ್ರವರಿ ಬಂದಿತು. ಸೀತಾಪತಿ ಮಹಾರಾಜರೂ ಕೂಡ ವಿರಜಾನಂದರಿಗೆ ಪುಸ್ತಕದ ವಿಷಯದಲ್ಲಿ ಸಹಕರಿಸಲಾರಂಭಿಸಿದರು. ಮಾಯಾವತಿಯ ಪ್ರೆಸ್ಸಿನ ನಿರ್ವಾಹಕರಾಗಿ ವಿರಜಾನಂದರ ಹೆಸರು 'ರಿಜಿಸ್ಟರ್' ಆಗಿತ್ತು. ಅದನ್ನೀಗ ಹೊಸ ಅಧ್ಯಕ್ಷರಾದ ಪ್ರಜ್ಞಾನಂದರಿಗೆ ಹಸ್ತಾಂತರಿಸಲು ಕೆಲವು ನಿಯಮ-ನಿಬಂಧನೆಗಳ ಅಡಚಣೆ ಇತ್ತು. ಏಕೆಂದರೆ ಪ್ರಜ್ಞಾನಂದರು ಆಗಿನ್ನೂ ಅದ್ವೈತ ಆಶ್ರಮದ ಟ್ರಸ್ಟಿಯಾಗಿರಲಿಲ್ಲ. ಅಷ್ಟೇ ಅಲ್ಲದೆ, ಪ್ರೆಸ್ಸಿಗಾಗಿ ನಿರ್ಮಿಸುತ್ತಿದ್ದ ಕಟ್ಟಡದ ಕಾರ್ಯವು ಇನ್ನೂ ಮುಗಿದಿರಲಿಲ್ಲ. ಈ ಎಲ್ಲ ಕಾರಣಗಳಿಂದ ವಿರಜಾನಂದರು ಮಾಯಾವತಿಯಲ್ಲೇ ಇರಬೇಕಾಯಿತು.

ವಿರಜಾನಂದರು ತಮ್ಮ ಸಮಯದ ಬಹು ಭಾಗವನ್ನು ಮದರ್ ಬಂಗಲೆಯಲ್ಲೇ ಕಳೆಯುತ್ತಿದ್ದರು. ಆಶ್ರಮವನ್ನು ನೋಡಿಕೊಳ್ಳುವ ಗುರುತರ ಜವಾಬ್ದಾರಿಯು ಈಗ ಇರಲಿಲ್ಲವಾದ್ದರಿಂದ ಓದು, ಬರಹ, ಜಪ-ಧ್ಯಾನ, ಬಂಗಲೆಯ ಚಿಕ್ಕ ತೋಟ ನೋಡಿಕೊಳ್ಳುವುದು ಅಥವಾ ಎಲ್ಲರೊಂದಿಗೆ ಸ್ವಲ್ಪ ಹೊತ್ತು 'ಕ್ರೋಕೆ' ಆಡುವುದು ಈ ಮುಂತಾದವುಗಳಿಂದ ಅವರ ಮನಸ್ಸು ನಿರಾಳವಾಗಿತ್ತು. ಇಷ್ಟರಲ್ಲಿ ಒಂದು ದಿನ ಮದರ್ ಸೇವಿಯರ್ ಲೋಧಾನ್ ಟುಕುರಾದ ಸ್ಥಳವನ್ನು ನೋಡಿಕೊಂಡು ಬಂದರು. ಆ ಸ್ಥಳವು ನಿರ್ಜನವಾಗಿದ್ದು, ಪ್ರಾಕೃತಿಕ ಸೌಂದರ್ಯ ಮತ್ತು ನೀರಿನ ವ್ಯವಸ್ಥೆಯಿಂದಾಗಿ ತಪಸ್ಯೆಗೆ ಅನುಕೂಲಕರವಾಗಿದ್ದರೂ, ಸುತ್ತಮುತ್ತ ಜನರ ವಾಸವಿರಲಿಲ್ಲ. ಆದ್ದರಿಂದ ಕ್ರೂರಮೃಗಗಳಿಂದ ಕೂಡಿದ ಆ ಅರಣ್ಯ ಪ್ರದೇಶದಲ್ಲಿ ಒಬ್ಬೊಬ್ಬರೇ ಅನೇಕ ದಿನ ಉಳಿದುಕೊಳ್ಳುವುದು ಮದರ್ ಸೇವಿಯರ್‌ಗೆ ಯುಕ್ತವಲ್ಲವೆಂದೇ ಅನ್ನಿಸಿತು, ಆದ್ದರಿಂದ ಅಲ್ಲಿ ಕುಟೀರವನ್ನು ಕಟ್ಟುವ ಆಲೋಚನೆಯನ್ನು ವಿರಜಾನಂದರು ಕೈಬಿಟ್ಟರು. ನಂತರ ಮಾಯಾವತಿಗೆ ೨೮ ಮೈಲಿ ಕೆಳಗಿದ್ದ 'ಜೋಲ್' ಎಂಬ ಹಳ್ಳಿಯೊಂದರಲ್ಲಿ ಒಂದು ತುಂಡು ಜಮೀನನ್ನು ೪೫೦/- ರೂ.ಗಳಿಗೆ ಖರೀದಿಸಲಾಯಿತು.

ಮಾಯಾವತಿಯಲ್ಲಿ ಪ್ರೆಸ್ಸಿಗಾಗಿ ಕಟ್ಟುತ್ತಿದ್ದ ಕಟ್ಟಡವು ಪೂರ್ಣಗೊಂಡಿತು. ೧೯೧೪ರ ಏಪ್ರಿಲ್ ೨ ರಂದು ಅದರ ಉದ್ಘಾಟನೆಯು ವಿಧಿವತ್ತಾಗಿ ಜರುಗಿತು. ವಿರಜಾನಂದರು ತಮ್ಮ ಒಂದು ಮುಖ್ಯ ಜವಾಬ್ದಾರಿಯಿಂದ ಮುಕ್ತಗೊಂಡರು. ಅವರ ಡೈರಿಯಿಂದ ತಿಳಿದು ಬರುವುದೇನೆಂದರೆ, ಈ ಸಮಯದಲ್ಲಿ ಅವರು ವಾರಕ್ಕೊಂದು ದಿನ (ಶುಕ್ರವಾರ) ಉಪವಾಸ ಮಾಡುತ್ತಿದ್ದರು. ಅಲ್ಲದೆ ಆಗಾಗ ಮೂರುದಿನ ಕೇವಲ ಹಾಲು ಅಥವಾ ಹಣ್ಣಿನ ರಸ ಮಾತ್ರ ಸೇವಿಸುತ್ತ ಇರುತ್ತಿದ್ದರು. ಜುಲೈ ೮ ರಂದು ವಿರಜಾನಂದರು ಹಾಗೂ ಎಲ್ಲರೂ ಕೂಡಿ ಮಾಯಾವತಿಯ ಮೊದಲ ಅಧ್ಯಕ್ಷರಾದ ಸ್ವಾಮಿ ಸ್ವರೂಪಾನಂದರ ಜನ್ಮದಿನವನ್ನು ಆಚರಿಸಿದರು. ದಸರೆಯ ದಿನಗಳಲ್ಲಿ ಒಮ್ಮೆ ಲೋಹಾಘಾಟಿಗೆ ಆಶ್ರಮವಾಸಿಗಳೊಂದಿಗೆ ಹೋಗಿ 'ರಾಮಲೀಲಾ' ನೋಡಿಕೊಂಡು ಬಂದರು. ಅಕ್ಟೋಬರ್ ೧೮ ರಂದು ಮಿಸೆಸ್ ಸೇವಿಯರ್ ಅವರ ೬೭ನೇ ಜನ್ಮದಿನ. ಅವರನ್ನು ಅಭಿನಂದಿಸಲು ಒಂದು ಸರಳ ಸಮಾರಂಭವನ್ನೇ ಮಾಡಿದರು. ಸ್ವಾಮಿ ವಿವೇಕಾನಂದರು ಅವರನ್ನು 'ಮಾ' ಎಂದು ಕರೆದು, ತಾಯ್ತನದ ಯಾವೊಂದು ಉದಾತ್ತ ಭಾವನೆಗಳನ್ನು ಅವರಲ್ಲಿ ಜಾಗೃತಗೊಳಿಸಿದ್ದರೋ ಅದರ ಮಹಾನ್ ಪ್ರಭಾವವು ಆಶ್ರಮದ ಹಿರಿಯ-ಕಿರಿಯರನ್ನೆಲ್ಲ ತಟ್ಟಿ, ಎಲ್ಲರಿಗೂ ಸದಾ ತೃಪ್ತಿ ತರುತ್ತಿತ್ತು.[೧]

ನೋಡನೋಡುತ್ತಿದ್ದಂತೆಯೇ ೧೯೧೪ರ ಒಂಭತ್ತು ತಿಂಗಳುಗಳು ಉರುಳಿಯೇ ಹೋದವು. ಸಂಕಲ್ಪಿಸಿದ್ದಂತೆ ಏಕಾಂತವಾದ ಮತ್ತು ಸರ್ವಬಾಧೆಗಳಿಂದಲೂ ಮುಕ್ತವಾದ ನಿರಂತರ ತಪಸ್ಯೆಯನ್ನು ಪ್ರಾರಂಭಿಸುವುದು ಯಾವಾಗ? ತನ್ನ ಭಾಗ್ಯದೇವತೆ ಎಂದು ಪ್ರಸನ್ನಳಾಗುವಳು? ಇನ್ನು ಸ್ವಾಮೀಜಿಯವರ ಜೀವನ ಚರಿತ್ರೆಯನ್ನು ಮಾಯಾವತಿಯಲ್ಲಿ ಕುಳಿತು ಪೂರ್ಣಗೊಳಿಸಲು ಅನೇಕ ದಿನಗಳೇ ಬೇಕಾಗುತ್ತವೆ. ಹೀಗೆಲ್ಲ ಆಲೋಚಿಸಿದ ವಿರಜಾನಂದರ ಮನಸ್ಸು ಏನು ಮಾಡಿದರೂ ಆ ಕೆಲಸದಲ್ಲಿ ಸಹಕರಿಸದಾಯಿತು. ಜೋಲ್ ಗ್ರಾಮದಲ್ಲಿ ಕೊಂಡ ಜಮೀನಿನಲ್ಲಿ

---

೧ ವಿರಜಾನಂದರು ಮುಂದೆ ಶ್ಯಾಮಲಾತಾಲಿನಲ್ಲಿದ್ದಾಗ ತಮ್ಮ ಪ್ರಿಯ ಮಿತ್ರರಾದ ಸ್ವಾಮಿ ಸ್ವರೂಪಾನಂದರ ಹಾಗೂ ಮದರ್ ಸೇವಿಯರ್‌ರವರ ಜನ್ಮದಿನಗಳನ್ನು (೮ನೇ ಜುಲೈ ಮತ್ತು ೧೮ನೇ ಅಕ್ಟೋಬರ್) ಆಚರಿಸುತ್ತಿದ್ದರು. ಮದರ್ ಸೇವಿಯರ್ ದೀನ-ದಲಿತರ ಬಂಧುವಾಗಿದ್ದರು; ಅನೇಕ ರೀತಿಯಲ್ಲಿ ಅವರಿಗೆ ಸಹಾಯ ಮಾಡುತ್ತಿದ್ದರು. ಆದ್ದರಿಂದ ಅವರ ಜನ್ಮ ದಿನಾಚರಣೆಯ ದಿವಸ ವಿರಜಾನಂದರು ದರಿದ್ರ ನಾರಾಯಣ ಸೇವೆಯನ್ನು ಮುಖ್ಯವಾಗಿ ಇಟ್ಟುಕೊಳ್ಳುತ್ತಿದ್ದರು. ಮದರ್ ಇಂಗ್ಲೆಂಡಿಗೆ ಹೊರಟು ಹೋದ ನಂತರ ಅವರ ಜನ್ಮದಿನದಂದು ಪ್ರತಿವರ್ಷವೂ ವಿರಜಾನಂದರು ಏನಾದರೂ ಉಡುಗೊರೆಯನ್ನು ಅವರಿಗೆ ಕಳುಹಿಸುತ್ತಿದ್ದರು.

ಕುಟೀರವೊಂದನ್ನು ಕಟ್ಟಿ ಕೊಂಡು ಅಲ್ಲಿ ಸ್ವತಂತ್ರವಾದ ಜೀವನ ನಡೆಸುತ್ತ ಜೊತೆಜೊತೆಯಲ್ಲೇ ಸ್ವಾಮೀಜಿಯವರ ಜೀವನ ಚರಿತ್ರೆಯ ಸಂಕಲನವನ್ನು ಮುಂದುವರಿಸುವುದೆಂದು ನಿರ್ಧರಿಸಿದರು. ಮಾಯಾವತಿಯ ಪರಿಸರದಿಂದ ಹೊರಹೋಗಲು ಅವರ ಜೀವ ಹಾತೊರೆಯುತ್ತಿತ್ತು.

* * *

ಅಜ್ಞಾತವಾದ ಭವಿಷ್ಯತ್ತಿನ ಗರ್ಭದಲ್ಲಿ ಏನೇನು ಅಡಗಿದೆಯೋ ಯಾರಿಗೆ ಗೊತ್ತು? ಕೇವಲ ತನ್ನ ಹೃದಯದ ನಿಷ್ಕಪಟ ವ್ಯಾಕುಲತೆಯೊಂದೇ ತನಗೆ ಗೊತ್ತು. ಸತ್ಯ ಬೇಕು, ಶಾಂತಿ ಬೇಕು, ಇವಿಷ್ಟನ್ನು ಪಡೆಯುವುದೇ ಮಹಾ ಬಲವಲ್ಲವೆ? ಈ ಬಲದಲ್ಲಿ ಭರವಸೆಯನ್ನಿಟ್ಟೇ ಮನುಷ್ಯರು ಛಲದಿಂದ ಮುಂದುವರಿಯುತ್ತಾರೆ. ಎಲ್ಲ ಸಮಯದಲ್ಲೂ ಸಫಲತೆಯೇ ಕಾದಿರುತ್ತದೆಂದೇನೂ ಅಲ್ಲ; ವಿಪರೀತ ದುಃಖ, ಎಡರು – ತೊಡರುಗಳು ಎದುರಾಗುತ್ತವೆ. ಆದರೆ ಅದರಿಂದೇನು? ''ನಿರಂತರ ಸಂಗ್ರಾಮವೇ ಅವನ ಪೂಜೆ; ಪರಾಜಯಗಳು ನಿನ್ನನ್ನು ನಡುಗಿಸದಿರಲಿ'' ಎಂದು ಸ್ವಾಮೀಜಿಯವರೇ ಹೇಳಿಲ್ಲವೆ? ಕಟ್ಟಡ ಕಟ್ಟಲು ಬೇಕಾಗುವ ಸಾಮಗ್ರಿ ಗಳನ್ನು ಹೊತ್ತು, ೨೦-೨೫ ಮಂದಿ ಪಹಾಡಿ ಕೆಲಸಗಾರರೊಂದಿಗೆ ಜೋಲ್ ಗ್ರಾಮಕ್ಕೆ ಹೊರಟ ದಿನದಂದು ವಿರಜಾನಂದರನ್ನು ಈ ರೀತಿಯಾದ ಆಲೋಚನೆಗಳೇ ಮುತ್ತಿದ್ದವೋ ಏನೋ! ಅಕ್ಟೋಬರ್ ೩೧ರಂದು ಕಾಲ್ನಡಿಗೆಯಲ್ಲಿ ಹೊರಟು, ನವಂಬರ್ ೨ರಂದು ಜೋಲ್ ಗ್ರಾಮವನ್ನು ತಲುಪಿದರು. ಅವರೊಂದಿಗೆ ಭೂಲೂವಾ ಎಂಬ ನಾಯಿಯೂ ಸಹ ಬಂದಿತ್ತು.



ಮದರ್ ಸೇವಿಯರ್ ಸಹ ಸ್ಥಳವನ್ನು ನೋಡಲು ವಿರಜಾನಂದರೊಂದಿಗೆ ಹೊರಡುವುದು ಎಂದಿತ್ತು. ಆದರೆ ಕೊನೆ ಗಳಿಗೆಯಲ್ಲಿ ಗೌರವಾನ್ವಿತ ಅತಿಥಿಗಳೊಬ್ಬರು ಬರುವ ಸುದ್ದಿ ಕೇಳಿ ಅವರಿಗೆ ಮಾಯಾವತಿಯನ್ನು ಬಿಟ್ಟು ಬರಲಾಗಲಿಲ್ಲ. ವಿರಜಾನಂದರು ಹೊರಟು ಅಲ್ಲಿಯ ಕೆಲಸವನ್ನು ಪ್ರಾರಂಭಿಸುವುದೆಂದೂ, ಮದರ್ ಸೇವಿಯರ್ ಮುಂದೊಂದು ದಿನ ಅನುಕೂಲವಾದಾಗ ಬಂದು ನೋಡುವುದೆಂದೂ ತೀರ್ಮಾನಿಸಲಾಯಿತು.

ಜೋಲ್ ಗ್ರಾಮದ ಆ ಸ್ಥಳವು ಯಾವ ಉಸ್ತುವಾರಿಯೂ ಇಲ್ಲದೆ ಕಾಡು, ಗಿಡ-ಪೊದೆಗಳಿಂದ ತುಂಬಿಹೋಗಿತ್ತು. ಅದರ ಒಂದಂಚಿನಲ್ಲಿ ಹಳೆಯ ಮಾಡಿಲ್ಲದ ಹುಲ್ಲಿನ ಗುಡಿಸಲೊಂದಿತ್ತು. ಅದಕ್ಕೆ ಟಿನ್ನನ್ನು ಹೊದೆಸಿ, ಜೊತೆಗೆ ಬಂದಿದ್ದ ಮೇಸ್ತ್ರಿ ಮುಂತಾದವರಿಗೆ ಅಲ್ಲಿ ಉಳಿದುಕೊಳ್ಳುವ ಏರ್ಪಾಟನ್ನು ಮಾಡಲಾಯಿತು. ವಿರಜಾನಂದರು ಎರಡು ಡೇರೆಗಳನ್ನು ತಂದಿದ್ದರು. ಒಂದರಲ್ಲಿ ತಾವು ತಂಗಿ, ಮತ್ತೊಂದನ್ನು ಮದರ್ ಸೇವಿಯರ್‌ಗೆ ಮೀಸಲಾಗಿಟ್ಟರು. ಕಾಡುಗಿಡಗಳನ್ನು ತೆಗೆದು ಹಾಕಿ ರಸ್ತೆ ಮಾಡಲಾರಂಭಿಸಿದರು. ಮೊದಲು ಎದುರಾದದ್ದು ನೀರಿನ ತೊಂದರೆ. ಸುಮಾರು ೩೦೦ ಅಡಿಗಳ ಕೆಳಗೆ ನೀರಿನ ಝರಿಯೊಂದು ಹರಿಯುತ್ತಿತ್ತು. ಅಲ್ಲಿಂದ ನೀರನ್ನು ಹೊತ್ತು ತಂದು ಮನೆ ಕಟ್ಟುವ ಕೆಲಸ ಕಷ್ಟಸಾಧ್ಯವಾದುದು. ಅದಕ್ಕೆ ತಗಲುವ ವೆಚ್ಚ ಸಹ ಬಹಳವೆ. ಇದರಿಂದಾಗಿ ಕಾಳೀಕೃಷ್ಣರು ಚಿಂತಿತರಾದರು. ಆದರೂ ಕೆಲಸವಂತೂ ನಡೆಯತೊಡಗಿತು. ೬ನೇ ನವೆಂಬರ್ ಮಿಸೆಸ್ ಸೇವಿಯರ್ ತಮ್ಮ ಜೊತೆಗೆ ಮಾಯಾವತಿಯ ಸಂನ್ಯಾಸಿಗಳೊಬ್ಬರನ್ನು ಕರೆದುಕೊಂಡು ಜೋಲ್ ಗ್ರಾಮಕ್ಕೆ ಹೋದರು. ನೀರಿನ ತೊಂದರೆಯನ್ನು ಕೇಳಿ ತುಂಬ ನಿರಾಶೆಗೊಳಗಾದರು. ಅಂದು ಅವರು ತುಂಬ ಬಳಲಿದ್ದರಿಂದ ವಿಶ್ರಾಂತಿ ಪಡೆದು, ಮಾರನೇ ದಿನ ಸುತ್ತ ಮುತ್ತ ತಿರುಗಾಡಿ, ಯಾವುದಾದರೂ ಅನುಕೂಲಕರವಾದ ಸ್ಥಳ ವಿದೆಯೇ ಎಂದು ನೋಡಲು ನಿಶ್ಚಯಿಸಿ ದರು. ಹಾಗೆ ಯಾವುದೂ ಯೋಗ್ಯ ಸ್ಥಳ ಗೋಚರಿಸದಿದ್ದರೆ ವಿರಜಾನಂದರು ಮಾಯಾವತಿಗೆ ಹಿಂತಿರುಗಿ ಹೋಗಬೇಕಾಗುತ್ತಿತ್ತು. ೩೦೦ ಅಡಿ ಕೆಳಗಿನಿಂದ ನೀರನ್ನು ಹೊತ್ತು ತಂದು ಅಡಿಗೆ ಹಾಗೂ ಇನ್ನಿತರ ಕೆಲಸ ಮಾಡುವುದಕ್ಕಿಂತ, 'I would rather choose Lodhantukura' (ಲೋಧಾನ್ ಟುಕುರಾವನ್ನೇ ಆಯ್ಕೆ ಮಾಡುತ್ತಿದ್ದೆ) ಎನ್ನುತ್ತಿದ್ದರು ಮಿಸೆಸ್ ಸೇವಿಯರ್.

ಅದೃಷ್ಟವೆಂಬಂತೆ ಅಂದಿನ ಸಂಜೆಯೇ 'ಶ್ಯಾನ್ಲಾ' ಎಂಬ ಹಳ್ಳಿಯ ಮುಖ್ಯಸ್ಥನಾದ ಹರಿಸಿಂಗ್ ಎಂಬಾತ ಇವರಿದ್ದಲ್ಲಿಗೆ ಬಂದ. ಒಬ್ಬರು ಸ್ವಾಮೀಜಿ ಮತ್ತು ಒಬ್ಬ ಆಂಗ್ಲ ಮಹಿಳೆ ಜಮೀನಿಗಾಗಿ ಹುಡುಕಾಟ ನಡೆಸುತ್ತಿದ್ದಾರೆಂದು ಈತ ಕೇಳಿದ್ದ. ತಾನು ಸಾಲವನ್ನು ತೀರಿಸಬೇಕಾದ್ದರಿಂದ ಹಣದ ಆವಶ್ಯಕತೆ ಇದೆ; ಅದಕ್ಕಾಗಿ ಶ್ಯಾನ್ಲಾ ಗ್ರಾಮದ ತಾಲ್ (ಸರೋವರದ) ಹತ್ತಿರ ಪ್ರಶಾಂತ ಸ್ಥಳದಲ್ಲಿರುವ ತನ್ನ ಜಮೀನನ್ನು ಮಾರಬೇಕೆಂದಿರುವುದಾಗಿ ವಿನಂತಿಸಿಕೊಂಡ. ಕಾಳೀಕೃಷ್ಣರು ಕೂಡಲೇ ಹೋಗಿ ಜಾಗವನ್ನು ನೋಡಿಕೊಂಡು ಬಂದರು. ಅವರ ಮನಸ್ಸಿಗೆ ಅದು ತುಂಬ ಹಿಡಿಸಿತು. ಮದರ್ ಸೇವಿಯರ್‌ಗೆ ಈ ವಿಷಯ ಹೇಳಿದಾಗ, ಅವರು ಮಾರನೇ ದಿನ ಜಾಗವನ್ನು ನೋಡಲು ಹೋಗುವುದಾಗಿ ತಿಳಿಸಿದರು. ಅಂತೆಯೆ ಮಾರನೇ ದಿನ ಬೆಳಗ್ಗೆ ದಂಡಿ ಮಾಡಿಕೊಂಡು ಹೊರಟರು. ಜಾಗವನ್ನು ಕೊಳ್ಳಬೇಕೆಂದಿದ್ದ ಸ್ಥಳದಲ್ಲಿ ಇಳಿದವರೇ,






**ಶ್ಯಾಮಲಾತಾಲ್**

This is the very spot (ಓ! ಇದೇ ಸ್ಥಳ!) ಎಂದು ಉದ್ಗರಿಸಿದರು. ಸುತ್ತ ಮುತ್ತ ವೀಕ್ಷಿಸಿದರು. ಅಲ್ಲಿಯ ದೃಶ್ಯ ಮನೋಹರವಾಗಿತ್ತು. ಜಮೀನು ಪರ್ವತದ ಇಳಿಜಾರಿನ ಕೊನೆಗಿದ್ದು, ಸ್ವಲ್ಪ ಸಮತಲ ಪ್ರದೇಶವನ್ನೂ ಹೊಂದಿತ್ತು. ಅಲ್ಲಿದ್ದ ಹರಿಸಿಂಹನ ಹಳೆಯ ಕಲ್ಲಿನ ಮನೆಯು ಭಗ್ನಾವಸ್ಥೆಯಲ್ಲಿತ್ತು. ಹತ್ತಿರದಲ್ಲೇ ಹರಿಯುತ್ತಿದ್ದ ಝರಿಯಿಂದ ವರ್ಷವಿಡೀ ರುಚಿಕರವಾದ ನೀರನ್ನು ಪಡೆಯಬಹುದಾಗಿತ್ತು. ಜಮೀನಿನ ಒಂದು ಸ್ಥಳದಿಂದ ಹಿಮಾಲಯದ ಚಿರ ಹಿಮಾಚ್ಛಾದಿತ ಪರ್ವತ ಶೃಂಗಗಳನ್ನು ನೋಡಬಹುದಿತ್ತು. ಮತ್ತೊಂದೆಡೆಯಿಂದ ಐದು ಸಾವಿರ ಅಡಿಗಳಷ್ಟು ಕೆಳಗೆ ಹರಡಿಕೊಂಡಿದ್ದ ಹಸಿರು ಸಮತಲ ಭೂಮಿಯು ದೃಷ್ಟಿಗೆ ಗೋಚರಿಸುತ್ತಿತ್ತು. ಜಮೀನಿನಿಂದ ೩೦೦ ಅಡಿಗಳಷ್ಟು ಕೆಳಗೆ ದೊಡ್ಡದೊಂದು ಸರೋವರವಿತ್ತು. ಇದರಿಂದ ಮತ್ತೂ ೩೦೦ ಅಡಿಗಳಷ್ಟು ಕೆಳಗೆ ಮತ್ತೊಂದು ದೊಡ್ಡ ಸರೋವರ. ಇದರ ಹೆಸರು 'ದೂಸ್ರಾ ತಾಲ್' (ಎರಡನೇ ಸರೋವರ). ಈ ಎರಡನೇ ಸರೋವರದಿಂದ ಮತ್ತೂ ೩೦೦ ಅಡಿಗಳಷ್ಟು ಕೆಳಗೆ ಮತ್ತೂ ಒಂದು ಸರೋವರ, ಹೆಸರು 'ತೀಸ್ರಾ ತಾಲ್' (ಮೂರನೇ ಸರೋವರ) ಹೀಗೆ ಇಡೀ ಪರಿಸರವೇ ಸ್ವಪ್ನಲೋಕದಂತೆ ಕಂಡುಬರುತ್ತಿತ್ತು. ಮದರ್ ಸೇವಿಯರ್ ಎಲ್ಲವನ್ನೂ ಕಂಡು ತುಂಬ ಸಂತೋಷಪಟ್ಟು 'ನಾನು ಈ ಸ್ಥಳಕ್ಕೆ ಹಿಂದೆ ಬಂದಿದ್ದೆನೋ ಎಂದೆನಿಸುತ್ತಿದೆ. ಎಲ್ಲವೂ ಚಿರಪರಿಚಿತವಾದಂತಿದೆ' ಎಂದು ಉದ್ಗರಿಸಿದರು.

ಮುರುಕಲು ಮನೆಯೊಂದಿಗೆ ಆ ಜಮೀನನ್ನು ಕೊಳ್ಳುವುದೆಂದು ನಿರ್ಧರಿಸಲಾಯಿತು. ಚಂಪಾವತ್‌ನ ತಹಸೀಲ್ದಾರನಲ್ಲಿಗೆ ಹೋಗಿ, ಜಮೀನಿನ ವಹಿವಾಟನ್ನು ನಿರ್ಧರಿಸುವುದೆಂದೂ ಹಣವನ್ನು ನೀಡಿದ ಒಂದು ದಿನದೊಳಗಾಗಿ ಮನೆಯನ್ನು ಖಾಲಿ ಮಾಡಿಕೊಡಬೇಕೆಂದು ಮಾಲೀಕನಾದ ಹರಿಸಿಂಗ್‌ನೊಡನೆ ಮಾತಾಗಿತ್ತು. ಏಕೆಂದರೆ ಮೇಸ್ತ್ರಿ ಹಾಗೂ ಗಾರೆಯವರು ಜೋಲ್‌ನಲ್ಲಿ ಕುಳಿತು ಕಾಯುತ್ತಿದ್ದರು. ನವೆಂಬರ್ ೮ ರಂದು ಮಧ್ಯಾಹ್ನ ಮದರ್ ಸೇವಿಯರ್ ಮತ್ತು ವಿರಜಾನಂದರು ಹರಿಸಿಂಗ್‌ನೊಂದಿಗೆ ಚಂಪಾವತ್‌ಗೆ ಹೋದರು. ತಹಸೀಲ್ದಾರನ ಸಮ್ಮುಖದಲ್ಲಿ ಜಮೀನಿನ ಬೆಲೆ ೭೦೦ ರೂ. ಎಂದು ನಿರ್ಧರಿಸಲಾಯಿತು. ಹಣವನ್ನು ಕಟ್ಟಿ, ನೋಂದಣಿ ಮಾಡಿಸಿಕೊಂಡು ಕಾಗದಪತ್ರಗಳೊಡನೆ ವಿರಜಾನಂದರು ೧೧ರಂದು ಜೋಲ್‌ಗೆ ಹಿಂದಿರುಗಿದರು. ಮಿಸೆಸ್ ಸೇವಿಯರ್ ಅಲ್ಲಿಂದ ಮಾಯಾವತಿಗೆ ಹಿಂದಿರುಗಿದರು.

೧೯೧೪ರ ನವೆಂಬರ್ ೧೩ರಂದು ಕಾಳೀಕೃಷ್ಣರು ಕೆಲಸಗಾರರು ಮತ್ತು ಸಾಮಗ್ರಿಗಳೊಂದಿಗೆ ಹೊಸದಾಗಿ ಕೊಂಡುಕೊಂಡ ಸ್ಥಳಕ್ಕೆ ಬಂದರು. ಸ್ಥಳೀಯರು ಅದನ್ನು 'ಶ್ಯಾನ್ಲಾ' ಎಂದು ಕರೆಯುತ್ತಿದ್ದರು. ಶ್ಯಾನ್ಲಾ ಎಂಬುದನ್ನು ಶ್ಯಾಮಲಾ ಎಂದು ರೂಪಾಂತರಗೊಳಿಸಿ ಅದಕ್ಕೆ ಅಲ್ಲೇ ಇದ್ದ ತಾಲ್ (ಸರೋವರ್) ಅನ್ನು ಸೇರಿಸಿ **'ಶ್ಯಾಮಲಾ ತಾಲ್'** ಎಂದು ಹೊಸದಾಗಿ ನಾಮಕರಣ ಮಾಡಿದರು. ಹೆಸರು ಕವಿತ್ವಪೂರ್ಣವಾಗಿಯೂ, ಅರ್ಥಪೂರ್ಣವಾಗಿಯೂ ಇತ್ತು. ವಿರಜಾನಂದರು ಡೇರೆಯಲ್ಲಿ ಇರತೊಡಗಿದರು. ಒಬ್ಬಾತ ಅವರಿಗೆ ಅಡುಗೆಯನ್ನು ಮಾಡುತ್ತಿದ್ದ. ಇದ್ದ ಮನೆಯನ್ನೇ ವಾಸಕ್ಕಾಗಿ ಜೀರ್ಣೋದ್ಧಾರ ಮಾಡಿ, ವಿಸ್ತರಿಸುವುದೆಂದು ಮದರ್ ಸೇವಿಯರ್ ಹೇಳಿದ್ದರಿಂದ ವಿರಜಾನಂದರು ಹಾಗೆಯೇ ಮಾಡತೊಡಗಿದರು. ಆದರೆ ಆ ಮನೆಯಲ್ಲಿ ಕೆಲವು ಬದಲಾವಣೆಗಳನ್ನು ಮಾಡದೇ ಇಡೀ ಮನೆಯನ್ನೇ ದುರಸ್ತಿ ಮಾಡದಿದ್ದರೆ ಅದು ವಾಸಕ್ಕೆ ಯೋಗ್ಯವಾಗುತ್ತಿರಲಿಲ್ಲ. ೪೦೦ ರೂಪಾಯಿಗಳಲ್ಲೇ ಕೆಲಸಗಳೆಲ್ಲವೂ ಪೂರ್ಣವಾಗುವುದೆಂದು ವಿರಜಾನಂದರು ಭಾವಿಸಿದ್ದರು; ಆದರೆ ಈಗ ೧೦೦೦ ರೂಪಾಯಿಗಳು ಸಾಲದೆಂಬಂತೆ ತೋರಿತು. ಮನೆಯಲ್ಲಿ ಒಂದಾದರೂ ಕಿಟಕಿಯಿರಲಿಲ್ಲ. ಅಲ್ಲದೆ ಬಾಗಿಲುಗಳು ಬಹಳ ತಗ್ಗಾಗಿದ್ದವು. ಗೋಡೆಯ ಕೆಲವಂಶವನ್ನು ಬಿಟ್ಟು, ಹಳೆಯ ಮನೆಯಲ್ಲಿ ಯಾವುದನ್ನೂ ಉಳಿಸಿಕೊಳ್ಳವಂತಿರಲಿಲ್ಲ. ಹೀಗಿದ್ದರೂ ವಿರಜಾನಂದರು ಧೈರ್ಯಗೆಡದೆ ನಿರ್ಮಾಣ ಕಾರ್ಯದಲ್ಲಿ ತೊಡಗಿದರು. ಮದರ್ ಸೇವಿಯರ್ ಕೂಡ ಪ್ರೋತ್ಸಾಹ ನೀಡುತ್ತ ಆಗಾಗ ಪತ್ರ ಬರೆಯುತ್ತಿದ್ದರು.

ಒಂದು ದಿನ ವಿರಜಾನಂದರು ಮಹಡಿಯಲ್ಲಿದ್ದ ಹಳೆಯ ಅಡುಗೆಮನೆಯಲ್ಲಿ ನಿಂತಿದ್ದಾಗ, ಹಠಾತ್ತಾಗಿ ಅದು ಕಳಚಿ ಬಿತ್ತು. ಅದೃಷ್ಟವಶಾತ್ ಅವರಿಗೇನೂ ಆಗಲಿಲ್ಲ. ಹೇಗೆ ನಿಂತಿದ್ದರೋ

ಹಾಗೆಯೇ ಭೂಮಿಗೆ 'ಅವತೀರ್ಣ'ರಾದರು ಅಷ್ಟೆ! ವಿರಜಾನಂದರು ಮಾಯಾವತಿಯಲ್ಲಿದ್ದಾಗ ಸೀತಾರಾಮನ್ ಎಂಬ ಮಲಬಾರಿನ ಕಡೆಯ ಬ್ರಹ್ಮಚಾರಿಯೂ ಸಹ ಅಲ್ಲಿದ್ದರು. ಅವರಿಗೆ ವಿರಜಾನಂದರೆಂದರೆ ತುಂಬ ಆಕರ್ಷಣೆ. ವಿರಜಾನಂದರು ಮಾಯಾವತಿಯಿಂದ ಹೊರಟುಬಂದಾಗ ಸೀತಾರಾಮನ್ ಸಹ ಅವರೊಂದಿಗೆ ಬರಲು ಇಚ್ಛಿಸಿದ್ದರು. ಆದರೆ ವಿರಜಾನಂದರು ಒಪ್ಪಿರಲಿಲ್ಲ. ಈಗ ಮತ್ತೊಮ್ಮೆ ಸೀತಾರಾಮನ್ ಪತ್ರ ಬರೆದು ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು. ಅವರ ಪ್ರಬಲ ಆಗ್ರಹವನ್ನು ಕಂಡು ವಿರಜಾನಂದರು ಬೇಡವೆನ್ನಲಾಗದೆ ಒಪ್ಪಿದರು. ಸೀತಾರಾಮನ್ ಶ್ಯಾಮಲಾತಾಲ್‌ಗೆ ಬಂದು ಇತರ ಕೆಲಸ ಕಾರ್ಯ ಗಳೊಂದಿಗೆ ಕಟ್ಟಡ ನಿರ್ಮಾಣದ ಮೇಲುಸ್ತುವಾರಿಕೆಯನ್ನೂ ಸಹ ಮಾಡ ತೊಡಗಿದರು. ಹಿಡಿದ ಕೆಲಸವನ್ನು ಮಾಡಿ ಮುಗಿಸು ವಂತಹ ಉತ್ಸಾಹವುಳ್ಳ ಈ ಯುವ ಬ್ರಹ್ಮಚಾರಿಯ ಮುಕ್ತ ಸಹಾಯವಿಲ್ಲದಿದ್ದರೆ ವಿರಜಾನಂದರಿಗೆ ವಾಸ್ತವವಾಗಿಯೂ ಶ್ಯಾಮಲಾ ತಾಲ್ ಆಶ್ರಮದ ಕೆಲಸಗಳನ್ನು ನಿಭಾಯಿಸಲು ತುಂಬ ಕಷ್ಟವಾಗುತ್ತಿತ್ತು.

ಕಟ್ಟಡದ ಉಸ್ತುವಾರಿಕೆಯ ಜೊತೆಗೆ ಬಿಡುವು ಸಿಕ್ಕಿದಾಗಲೆಲ್ಲ ಸ್ವಾಮೀಜಿಯವರ ಜೀವನ ಚರಿತ್ರೆಯ ೩ನೇ ಭಾಗದ ಕರಡು ಪ್ರತಿಯನ್ನು ತಿದ್ದುವ ಕೆಲಸವೂ ನಡೆಯತೊಡಗಿತು. ಸೀತಾರಾಮನ್ ಅವರ ಸಹಾಯವು ಇದಕ್ಕೂ ಸಹ ಸಿಗುತ್ತಿತ್ತು. ೧೯೧೪ನೇ ವರ್ಷದ ಕೊನೆಯೂ ಬಂದಿತು. ಆದರೆ ಎಲ್ಲ ಕೆಲಸ ಮುಗಿಯಲು ಇನ್ನೂ ೪-೫ ತಿಂಗಳುಗಳೇ ಹಿಡಿಯಬಹುದು ಎನಿಸಿತು. ಕೆಲಸಕ್ಕೆ ಇಳಿದಾಗಿದೆ, ಮುಗಿಸದೆ ಗತ್ಯಂತರವಿಲ್ಲ, ಕೆಲವು ತಿಂಗಳಲ್ಲೇ ಸ್ವಾಮೀಜಿಯವರ ಜೀವನ ಚರಿತ್ರೆಯ ಮೂರನೇ ಖಂಡದ ಉಳಿದ ಕರಡನ್ನೂ ಸಹ ಮುಗಿಸಿದರು.

ಡಿಸೆಂಬರ್ ಕೊನೆಯ ಭಾಗದಲ್ಲಿ ವಿರಜಾನಂದರು ಕಾರ್ಯ ನಿಮಿತ್ತ ಕೆಲವು ದಿನಗಳಿಗೋಸ್ಕರ ಮಾಯಾವತಿಗೆ ಹೋಗಬೇಕಾಗಿ ಬಂತು. ಅಲ್ಲಿ ಮದರ್ ಸೇವಿಯರ್ ಅವರ ಪ್ರೀತಿಯ ನಾಯಿ ಗ್ಲಾಮಾ, ವಿಷಮರೋಗಕ್ಕೆ ತುತ್ತಾಗಿ ಉಸಿರಾಡಲು ಕಷ್ಟಪಡುತ್ತಿತ್ತು; ಮಾರನೇ ದಿನ ಸತ್ತುಹೋಯಿತು. ಇದಕ್ಕಾಗಿ ಮದರ್ ಸೇವಿಯರ್ ತುಂಬ ದುಃಖಿಸಿದರು. ಮದರ್ ಸೇವಿಯರ್ ಅವರನ್ನು ವಿರಜಾನಂದರು ಕೆಲವು ದಿನಗಳ ಮಟ್ಟಿಗೆ ಶ್ಯಾಮಲಾ ತಾಲ್‌ನಲ್ಲಿ ಬಂದಿರಬೇಕೆಂದು ಕೇಳಿಕೊಂಡರು. ಅದಕ್ಕವರು, ''ಕಟ್ಟಡವು ಪೂರ್ಣಗೊಂಡ ನಂತರ ನಾನು ಅಲ್ಲಿ ಕೆಲವು ತಿಂಗಳಿದ್ದು ಅಲ್ಲಿಂದಲೇ ಇಂಗ್ಲೆಂಡಿಗೆ ಹೋಗುತ್ತೇನೆ'' ಎಂದರು. ೩೦ನೇ ಡಿಸೆಂಬರ್ ಕಾಳೀಕೃಷ್ಣರು ಶ್ಯಾಮಲಾ ತಾಲ್‌ಗೆ ಹಿಂತಿರುಗಿದರು. ೧೯೧೪ನೇ ಡಿಸೆಂಬರ್ ೩೧ರಂದು ತಮ್ಮ ದಿನಚರಿ ಪುಸ್ತಕದಲ್ಲಿ ವಿರಜಾನಂದರು ಹೀಗೆ ಬರೆದಿದ್ದಾರೆ:

''ಕಳೆದುಹೋದ ವರ್ಷಕ್ಕೆ ನನ್ನ ಅಂತಿಮ ನಮಸ್ಕಾರ. ಈ ವರ್ಷದಲ್ಲಿ ನಾನು ಅನೇಕ ಅನುಭವಗಳನ್ನು ಪಡೆದೆ, ಅನೇಕ ಅನುಗ್ರಹಗಳನ್ನು ಗಳಿಸಿದೆ, ಸ್ವಾಮೀಜಿಯವರ 'ಜೀವನ ಚರಿತ್ರೆ'ಯ ೩ನೇ ಸಂಪುಟದ ಪರಿಷ್ಕರಣ ಮುಗಿಸಿದೆ, ಶ್ಯಾಮಲಾತಾಲಿನಲ್ಲಿ ನನ್ನ ಆಶ್ರಮಕ್ಕಾಗಿ ಜಮೀನು ಕೊಂಡು, ನಿರ್ಮಿಸಲು ಪ್ರಾರಂಭಿಸಿದೆ. ಈ ವರ್ಷ ನನಗೆ ತುಂಬ busy ಆದ ವರ್ಷ. ನಾನು ಯಥಾಶಕ್ತಿ ದುಡಿದಿದ್ದೇನೆ, ಯಾವುದಕ್ಕೂ ವಿಷಾದವಿಲ್ಲ. ಹೊಸ ವರ್ಷವು ಹಿಂದಿನದಂತೆಯೇ ಪರಿಪೂರ್ಣವಾಗಿರಲಿ, ಸ್ವಾಮೀಜಿಯವರ ಜೀವನ ಚರಿತ್ರೆಯ ೪ನೇ ಸಂಪುಟ ಬೆಳಕನ್ನು ಕಾಣುವಂತಾಗಲಿ, ಆಶ್ರಮ ಕಟ್ಟಡದ ನಿರ್ಮಾಣ ಪೂರ್ಣಗೊಳ್ಳಲಿ, ಮಾಯಾವತಿಯ ಉಳಿದ ಜವಾಬ್ದಾರಿಗಳಿಂದ ಮುಕ್ತಗೊಂಡು ನಿರಂತರ ಧ್ಯಾನ ಹಾಗೂ ಶಾಂತಿಯ ಹೊಸ ಅಧ್ಯಾಯವನ್ನಾರಂಭಿಸಿ, ಪರಮ ಸತ್ಯದ ಅನುಸಂಧಾನದಲ್ಲಿ ನಿರತನಾಗುವಂತಾಗಲಿ. ಪರಮಾತ್ಮನು ಸರ್ವದಾ ತನ್ನ ಸಹಾಯವನ್ನೀಯಲಿ. ಹರಿಃ ಓಂ ತತ್ ಸತ್.''

ಈಗ ಹೊಸ ವರ್ಷವಾದ ೧೯೧೫ ನಡೆಯುತ್ತಲಿದೆ. ಜನವರಿ ೧೦, ಸ್ವಾಮಿ ವಿವೇಕಾನಂದರ ಜಯಂತಿಯ ಪ್ರಯುಕ್ತ ವಿರಜಾನಂದರು ಕೂಲಿಗಳಿಗೆ ಮತ್ತು ಗ್ರಾಮವಾಸಿಗಳಿಗೆ ಅನ್ನಸಂತರ್ಪಣೆ ನೀಡಿ, ನರನಾರಾಯಣರಿಗೆ ಸೇವೆ ಸಲ್ಲಿಸಿ ಆನಂದಿಸಿದರು.

ಒಂದು ದಿನ ರಾತ್ರಿ ವಿರಜಾನಂದರ ಡೇರೆಯಿಂದ ಸ್ಟೀಲಿನ ಟ್ರಂಕೊಂದು ಕಳುವಾಯಿತು. ಕಳುವಾದಾಗ ಅದು ಅವರ ತಲೆಯ ಬಳಿಯೇ ಇದ್ದಿತಾದರೂ ನಿದ್ರೆಯಲ್ಲಿ ಅವರಿಗೇನೂ ತಿಳಿಯಲಿಲ್ಲ. ಮಾರನೇ ದಿನ ಟ್ರಂಕು ದೂರದ ಸರೋವರದ ಅಂಚಿನಲ್ಲಿ ಮುರಿದು ಬಿದ್ದಿತ್ತು. ಅದರಲ್ಲಿದ್ದ ಕಾಗದ ಪತ್ರಗಳು ಚೆಲ್ಲಾಪಿಲ್ಲಿಯಾಗಿದ್ದವು. ಆದರೆ ಅದರಲ್ಲಿಟ್ಟಿದ್ದ ಹಣ (ಸುಮಾರು ೩೦೦/-ರೂ.) ಮಾತ್ರ ಇರಲಿಲ್ಲ. ಇದರಿಂದಾಗಿ ವಿರಜಾನಂದರು ತುಂಬ ಚಿಂತೆಗೆ ಒಳಗಾದರು. ಕಟ್ಟಡದ ಕೆಲಸ ಮುಕ್ತಾಯವಾಗುತ್ತ ಬಂದಿತ್ತು, ಕೂಲಿಗಳಿಗೆಲ್ಲ ಹಣ ನೀಡಬೇಕು, ಅಷ್ಟರಲ್ಲೇ ಹಣ ಕಳುವಾಗಿದೆ.

ವಿರಜಾನಂದರು ತುಂಬ ವಿಚಲಿತರಾಗಿ ಮದರ್ ಸೇವಿಯರ್ ಅವರಿಗೆ ತಮ್ಮ ಪರಿಸ್ಥಿತಿ ತಿಳಿಸಿದರು. ಸ್ವಭಾವತಃ ಉದಾರಶೀಲರಾದ ಮದರ್ ವಿರಜಾನಂದರಿಗೆ ಹಣವನ್ನು ಕಳುಹಿಸಿಕೊಟ್ಟರು. ಕಳ್ಳನಿಗಾಗಿ ಹುಡುಕಾಟ ಆರಂಭವಾಯಿತು. ಗ್ರಾಮದವನೊಬ್ಬನ ಬಗ್ಗೆ ಎಲ್ಲರಿಗೂ ಸಂದೇಹವಿತ್ತು. ಆದರೆ ಅದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿರಲಿಲ್ಲ. ಆದರೂ ಸಹ ಆ ವ್ಯಕ್ತಿ ಮತ್ತವನ ಸಹಚರನನ್ನು ಲೋಹಾಘಾಟಿನ ನ್ಯಾಯಾಧೀಶನ ಬಳಿ ಹಾಜರುಪಡಿಸಲಾಯಿತು. ವಿರಜಾನಂದರೂ ಸಹ ವಿಚಾರಣೆಯನ್ನು ವೀಕ್ಷಿಸಲು ಹೋದರು. ಶಂಕಿಸಲ್ಪಟ್ಟ ವ್ಯಕ್ತಿಯ ಮನೆಯಿಂದ ಕೆಲವು ಹಣದ ಚೀಲಗಳನ್ನು ವಶಪಡಿಸಿಕೊಳ್ಳಲಾಗಿತ್ತು. ಅವುಗಳು ತನ್ನದೇ ಎಂದು ವಿರಜಾನಂದರು ನ್ಯಾಯಾಲಯದಲ್ಲಿ ಘೋಷಿಸಿದರೆ, ತಕ್ಷಣವೇ ಅಪರಾಧಿಗೆ ಶಿಕ್ಷೆಯಾಗುವುದೆಂದು ನ್ಯಾಯಾಧೀಶರು ತಿಳಿಸಿದರು. ಆದರೆ ವಿರಜಾನಂದರು ತಮಗೆ ತಿಳಿದ ವಿಷಯಗಳನ್ನಷ್ಟೇ ಹೇಳಿ ಸುಮ್ಮನಾದರು. ಕಾನೂನಿನ ಪ್ರಕಾರ ಸಾಕಷ್ಟು ಸಾಕ್ಷ್ಯಾಧಾರಗಳು ಸಿಗದ ಕಾರಣ ಶಂಕಿತರನ್ನು ಬಿಟ್ಟುಬಿಡಲಾಯಿತು.

*(ಮುಂದುವರಿಯುವುದು)*

# ಸ್ವಾಮಿ ಭಾಸ್ಕರಾನಂದ

ಮೂಲ ಹಿಂದಿ : **ಅಕ್ಷಯ ಕುಮಾರ ಬ್ಯಾನರ್ಜಿ** ಅನು: **ಮಾತಾ ತ್ಯಾಗಮಯೀ**

'ಶ್ರೀರಾಮಕೃಷ್ಣ ವಚನವೇದ'ದಲ್ಲಿ ಭಕ್ತನೊಬ್ಬನು ಕಾಶಿಯಲ್ಲಿದ್ದ ಸಂತರೊಬ್ಬರ ವಿಚಾರವಾಗಿ ಶ್ರೀರಾಮಕೃಷ್ಣರಿಗೆ ತಿಳಿಸುತ್ತಾನೆ. ಅವರು ಆ ಸಂತನ ವಿಚಾರವಾಗಿ ಸಾಕಷ್ಟು ವಿಚಾರಿಸುತ್ತಾರೆ. ಅವರೇ ಸ್ವಾಮಿ ಭಾಸ್ಕರಾನಂದರು. ಮುಂದೆ ಶ್ರೀಮಾತೆ ಶಾರದಾದೇವಿಯವರು ಹಾಗೂ ಸ್ವಾಮಿ ವಿವೇಕಾನಂದರು ಈ ಸಂತರನ್ನು ಭೇಟಿ ಮಾಡಿ, ಅವರ ಆಧ್ಯಾತ್ಮಿಕ ಉನ್ನತಿಯ ಬಗ್ಗೆ ಕೊಂಡಾಡಿದ್ದಾರೆ. ಇವರ ಜೀವನದ ಸಂಕ್ಷಿಪ್ತ ಚರಿತ್ರೆಯನ್ನಿಲ್ಲಿ ನೀಡುತ್ತಿದ್ದೇವೆ. ಅನುವಾದಕಿ ಚಳ್ಳಕೆರೆ ಶ್ರೀ ಶಾರದಾಶ್ರಮದ ಅಧ್ಯಕ್ಷರು.



ಸ್ವಾಮಿ ಭಾಸ್ಕರಾನಂದ ಸರಸ್ವತಿಯರು ೧೯ನೆಯ ಶತಮಾನದಲ್ಲಿ ಕಾಶಿಯಲ್ಲಿದ್ದ ಪ್ರಸಿದ್ಧ ಸಂತರು. ಅವರು ೧೮೩೩ ರಿಂದ ೧೮೯೯ರ ವರೆಗೆ, ೬೬ ವರ್ಷ ಬದುಕಿದ್ದರು. ಅದರಲ್ಲಿ ಅವರು ತಮ್ಮ ಕೊನೆಯ ೩೦ ವರ್ಷಗಳನ್ನು ಕಾಶಿಯಲ್ಲಿದ್ದ ತಮ್ಮ ಆಶ್ರಮ ಆನಂದಬಾಗ್‌ನಲ್ಲಿ ಕಳೆದರು.

ಸ್ವಾಮಿ ಭಾಸ್ಕರಾನಂದರು ಜನಿಸಿದ್ದು ಕಾನ್‌ಪುರ ಜಿಲ್ಲೆಯ ಒಂದು ಸಣ್ಣ ಹಳ್ಳಿಯಲ್ಲಿ. ಬಾಲ್ಯದಿಂದಲೇ ಅವರು ಪ್ರಚಂಡ ಮೇಧಾವಿಯಾಗಿದ್ದರು. ಯೌವನದಲ್ಲೇ ಅವರು ವೇದಾಂತದ ಮಹಾನ್ ಪಂಡಿತರೆಂದು, ಸಂಸ್ಕೃತ ವಿದ್ವಾಂಸರೆಂದು ಪ್ರಖ್ಯಾತರಾಗಿದ್ದರು. ವೇದಾಂತ ಶಾಸ್ತ್ರವು ಅವರ ಮನಸ್ಸು-ಬುದ್ಧಿಗಳನ್ನು ತುಂಬಿಕೊಂಡಿತ್ತು. ಜಗತ್ತು ತನ್ನೆಲ್ಲ ವೈಭವಗಳ ಹೊರತಾಗಿಯೂ ಕನಸಾಗಿ ಅವರಿಗೆ ಗೋಚರಿಸಿತು. ಭಗವಂತನ ಕರೆ ಅವರನ್ನು ಅಶಾಂತರನ್ನಾಗಿಸಿತು, ವ್ಯಾಕುಲರನ್ನಾಗಿಸಿತು.

ಅವರು ಜಗತ್ತಿನ ಭೋಗಸುಖಗಳ ಕಡೆಗೆ ವಿರಕ್ತರಾಗಿರುವುದನ್ನು ಗಮನಿಸಿ ಅವರ ತಂದೆ ಅವರಿಗೆ ಮದುವೆಯಾಗುವಂತೆ ಒತ್ತಾಯಿಸಿದರು — ಸುಂದರಿಯಾದ ಪತ್ನಿ, ಗೃಹಸ್ಥ ಜೀವನದ ಭಾರವು ಅವರನ್ನು ಜಗತ್ತಿಗೆ ಕಟ್ಟಿಹಾಕಬಹುದೆಂಬ ಉದ್ದೇಶದಿಂದ, ಮದುವೆಯೂ ಆಯಿತು. ಆದರೆ ಅವರ ಅಂತರಾಳದಲ್ಲಿ ಹೊತ್ತಿಕೊಂಡಿದ್ದ ಬೆಂಕಿ ಕ್ಷಣಿಕವಾದುದಲ್ಲ. ತಮ್ಮ ಪತ್ನಿ ಮಗನಿಗೆ ಜನ್ಮ ನೀಡಿದ ರಾತ್ರಿಯಂದೇ ಅವರು ಕುಟುಂಬ ಜೀವನದ ಕರ್ತವ್ಯಗಳನ್ನು ಪೂರೈಸಿದ ಭಾವನೆಯಿಂದ ಮನೆಯನ್ನು ತೊರೆದು ಹೊರಟುಹೋದರು. ಯುವ ಪತ್ನಿ, ನವಜಾತ ಶಿಶುವಿನ ಮುಗ್ಧ ಮುಖ, ತಾಯ್ತಂದೆಯರ ವಾತ್ಸಲ್ಯಪೂರ್ಣ ಬಂಧನ, ತನ್ನ ಉಜ್ಜ್ವಲವಾದ ಭವಿಷ್ಯ — ಇವು ಯಾವುವೂ ಅವರ ಮನಸ್ಸನ್ನು ಆಕರ್ಷಿಸಲಿಲ್ಲ. ಆಗ ಅವರಿಗೆ ಕೇವಲ ೧೮ ವರ್ಷ.

ಆಧ್ಯಾತ್ಮಿಕ ತೃಷೆಯಿಂದ ಮೋತಿರಾಮ (ಅವರ ಪೂರ್ವಾಶ್ರಮದ ಹೆಸರು) ಶಾಂತಿಯ ಬೆಳಕನ್ನು ಅರಸುತ್ತ ಕೆಲವು ಕಾಲ ಪರಿವ್ರಾಜಕರಾಗಿ ಸಂಚರಿಸಿದರು. ಅವರು ಐತಿಹಾಸಿಕ ಪ್ರಸಿದ್ಧ ನಗರಿಯಾದ ಉಜ್ಜಯಿನಿಗೆ ಹೋದರು. ಅಲ್ಲಿನ ಅಧಿಷ್ಠಾತೃದೇವ ಮಹಾಕಾಲನಿಗೆ ಮನಸೋತು ಅಲ್ಲಿಯೇ ನೆಲೆಸಿದರು. ಅವರು ಏಕನಿಷ್ಠೆಯಿಂದ ಶಿವಪೂಜೆಯಲ್ಲಿ ಶರಣಾದರು. ಅವರು ಶಿವಮಯರೇ ಆದರು. ಆದರೆ ಅವರಿಗೆ ಪೂರ್ಣ ತೃಪ್ತಿಯಾಗಲಿಲ್ಲ.

ಅವರು ಯೋಗಸಾಧನೆಗಳನ್ನು ಶಿಸ್ತುಬದ್ಧವಾಗಿ ಮಾಡಲು ನಿರ್ಧರಿಸಿದರು. ಆದರೆ ಗುರುವನ್ನು ಎಲ್ಲಿ ಹುಡುಕುವುದು? ಆ ಸಂದರ್ಭದಲ್ಲಿ ಸಂತಶ್ರೇಷ್ಠರಾದ ಪರಮಹಂಸ ಪೂರ್ಣಾನಂದ ಸರಸ್ವತಿಯವರು ತೀರ್ಥಯಾತ್ರೆಯನ್ನು ಮಾಡುತ್ತ ಉಜ್ಜಯಿನಿಗೆ ಬಂದಿದ್ದರು. ಅವರು ಮಹಾಯೋಗಿಗಳು. ವೃದ್ಧ ಸಾಧು ಹಾಗೂ ಯುವ ಸಾಧಕರಿಬ್ಬರೂ ಪರಸ್ಪರ ಆಕರ್ಷಿತರಾದರು. ಮೋತಿರಾಮರು ಗುರುವಿನಿಂದ ಯೋಗದೀಕ್ಷೆಯನ್ನು ಪಡೆದು ತಮ್ಮ ಸ್ವಭಾವಸಹಜ ಉತ್ಸಾಹದಿಂದ ಯೋಗಸಾಧನೆಯಲ್ಲಿ ಮಗ್ನರಾದರು. ಅವರ ದೇಹ, ಮನ, ಬುದ್ಧಿಗಳು ಯೋಗಸಾಧನೆಗೆ ಅತ್ಯಂತ ಯೋಗ್ಯ, ಉತ್ತಮ ಅಧಿಕಾರಿಯಾಗಿದ್ದವು. ಆದ್ದರಿಂದ ಕೆಲವೇ ವರ್ಷಗಳಲ್ಲಿ ಅವರು ಅದ್ಭುತ ಮನೋಭೂಮಿಕೆಯನ್ನು ಪಡೆದರು. ಅನೇಕ ಅದ್ಭುತ ಅತೀಂದ್ರಿಯ ಶಕ್ತಿಗಳನ್ನು ಪಡೆದುಕೊಂಡರು. ಆದರೆ ಅವರು ಅವುಗಳಿಂದ ಮುಗ್ಧರಾಗಲಿಲ್ಲ. ಅವನ್ನೂ ಮೀರಿ ಬೆಳೆದರು. ಅವರ ಆತ್ಮವು ದೇಹ-ಮನ-ಬುದ್ಧಿಗಳ ಬಂಧನದಿಂದ ಮುಕ್ತವಾಯಿತು. ತಮ್ಮ ಸ್ವಸ್ವರೂಪದಲ್ಲಿ

ನೆಲೆಸಿ ಪರಮಾನಂದವನ್ನು ಪಡೆದರು. ಅವರು ತಮ್ಮನ್ನು ತಾವು ದೇಹ, ಮನಗಳಿಂದ ಪ್ರತ್ಯೇಕವೆಂದು ಸಾಕ್ಷಾತ್ಕರಿಸಿಕೊಂಡರು.

ಯೋಗಸಾಧನೆಯಿಂದ ಅವರು ಅತ್ಯುನ್ನತ ಆಧ್ಯಾತ್ಮಿಕ ಸ್ತರ ವನ್ನು ತಲುಪಿದಾಗ ಗುರುವಿನಿಂದ ಸಂನ್ಯಾಸವನ್ನು ತೆಗೆದು ಕೊಂಡರು. ಆಗ ಅವರಿಗೆ ೨೭ ವರ್ಷ. ಗುರು ಅವರಿಗೆ 'ಭಾಸ್ಕರಾ ನಂದ' ಎಂಬ ನಾಮವನ್ನು ನೀಡಿದರು. ಅವರ ಆಧ್ಯಾತ್ಮಿಕ ಸಿದ್ಧಿ ಅಸಾಧಾರಣವಾಗಿತ್ತು. ತಾವು ಕೈಗೊಂಡ ಪ್ರತಿಯೊಂದು ಸಾಧನಾ ಮಾರ್ಗದಲ್ಲೂ ಅವರು ಅತ್ಯಲ್ಪಕಾಲದಲ್ಲಿ ಸಿದ್ಧಿಯನ್ನು ಪಡೆ ದರು. ಅವರು ವಿಶ್ವದ ವಿವಿಧತೆಗಳ ಹಿಂದಿನ ಏಕತೆಯನ್ನು ಸಾಕ್ಷಾತ್ಕರಿಸಿಕೊಂಡರು.

ಅವರ ಮನಸ್ಸು ಪ್ರಜ್ಞಾತೀತ ಸ್ತರದಿಂದ ಸಾಮಾನ್ಯ ಸ್ತರಕ್ಕೆ ಇಳಿದಾಗ ಸಮಸ್ತ ಮಾನವತೆಯ ಕಡೆಗೆ, ಪಶುಪಕ್ಷಿಗಳಿಗೆ ಹಾಗೂ ವಿಶ್ವದ ಪ್ರತಿಯೊಂದು ವಸ್ತುವಿನ ಮೇಲೆ ಅತ್ಯಪಾರ ಪ್ರೇಮ ಉದಿಸಿತು. ಏಕೆಂದರೆ ಅವರು ಪ್ರತಿಯೊಂದು ವಸ್ತುವಿನಲ್ಲೂ ಬ್ರಹ್ಮವನ್ನು ದರ್ಶಿಸಿದರು. ಪ್ರತಿಯೊಂದನ್ನು ಅವರು ಭಗವಂತನ ವಿಭೂತಿಯೆಂದು ಕಾಣತ್ತಿದ್ದರು. ಹಿಂದೆ ಬಂಧನ ಮತ್ತು ಶೋಕಕ್ಕೆ ಕಾರಣವೆಂದು ಬಗೆದು ತೊರೆದಂತಹ ಇಂದ್ರಿಯ ಜಗತ್ತಿನ ದ್ವಂದ್ವ ಗಳು ಈಗ ಸಾಕ್ಷಾತ್ಕಾರದ ನೆಲೆಯಿಂದ ಹೊಸ ರೂಪವನ್ನು ತಾಳಿ ದವು ಮತ್ತು ಈಗ ಅವು ಭಗವಂತನ ಲೀಲೆಯಿಂದ ಸ್ವೀಕಾರಾರ್ಹ ವಾದವು.

ಹೀಗೆ ತಮ್ಮ ಸಾಧನೆಯ ಗುರಿಯನ್ನು ತಲುಪಿದ ಸ್ವಾಮಿ ಭಾಸ್ಕರಾನಂದರು ಭಾರತದ ಎಲ್ಲ ಪ್ರಮುಖ ತೀರ್ಥಗಳಿಗೆ ಭೇಟಿಯಿತ್ತರು. ಅವರು ತೀರ್ಥಯಾತ್ರೆಯ ಹೆಚ್ಚಿನ ಭಾಗವನ್ನು ಕಾಲ್ನಡಿಗೆಯಲ್ಲಿಯೇ ಕ್ರಮಿಸಿದರು. ಅವರು ಆಗಿನ ಕಾಲದ ಪ್ರಖ್ಯಾತ ವೇದಾಂತಿಗಳಾದ ಶ್ರೀ ಅನಂತರಾಮ ಶಾಸ್ತ್ರಿಯವರನ್ನು ಭೇಟಿಯಾಗಿ, ವೇದಾಂತಶಾಸ್ತ್ರವನ್ನು ಇನ್ನಷ್ಟು ಆಳವಾಗಿ ವಿಸ್ತಾರ ವಾಗಿ ಅಧ್ಯಯನ ಮಾಡಿದರು. ಯಾತ್ರೆಯನ್ನು ಮುಗಿಸಿ ಅವರು ವಾರಣಾಸಿಯಲ್ಲಿ ಉಳಿದುಕೊಂಡರು. ಅದು ಬಹುಶಃ ದೈವಾಜ್ಞೆ ಯಿಂದಿರಬಹುದು. ಅವರು ಅಲ್ಲಿನ ಸಮಾಜಕ್ಕೆ ಗುರುವಾಗ ಬೇಕಿತ್ತು. ಯಾವುದೇ ಪೂರ್ವಯೋಜನೆಯಿಲ್ಲದೆ ಅವರು ಕಾಶಿ ಯಿಂದ ಆಕರ್ಷಿಸಲ್ಪಟ್ಟರು.

ತಾವು ವಾರಣಾಸಿಯಲ್ಲಿದ್ದ ಮೊದಲ ವರ್ಷಗಳಲ್ಲಿ ಅವರು ತರುತಲವಾಸವನ್ನು ಮಾಡುತ್ತ ಹಗಲಿರಳೆನ್ನದೆ ನಿರಂತರ ಧ್ಯಾನಸ್ಥ ರಾಗಿರುತ್ತಿದ್ದರು. ಬೇಸಿಗೆಯ ತೀಕ್ಷ್ಣ ಸೂರ್ಯಕಿರಣಗಳು, ಚಳಿ ಗಾಲದ ಶೀತಲ ಮಾರುತಗಳು, ವರ್ಷಋತುವಿನ ಗುಡುಗು-ಮಿಂಚು-ಮಳೆ-ಬಿರುಗಾಳಿ- ಇವು ಯಾವುವೂ ಅವರ ಗಾಢ ವಾದ ಧ್ಯಾನಶೀಲ ಮನೋವೃತ್ತಿಯನ್ನು ವಿಚಲಿತಗೊಳಿಸಲಿಲ್ಲ. ಕೆಲವೊಮ್ಮೆ ಅವರು ಭಗವತ್ಪ್ರೇಮದಿಂದ ಮತ್ತರಾಗಿ ಗಟ್ಟಿಯಾಗಿ 'ಶಿವ, ಶಿವ, ವಿಶ್ವನಾಥ, ವಿಶ್ವನಾಥ' ಎಂದು ಕೂಗುತ್ತಿದ್ದರು. ಅವರು ಯಾವತ್ತೂ ಭಿಕ್ಷೆಗೆ ಹೋಗಲಿಲ್ಲ. 'ಯದೃಚ್ಛಾಲಾಭ ಸಂತುಷ್ಟೋ..' ಎಂದು ದೊರೆತ ಆಹಾರದಲ್ಲಿ ತೃಪ್ತರಾಗಿರು ತ್ತಿದ್ದರು. ಶರೀರದ ಸುಖಕ್ಕಾಗಿ ಅವರು ಯಾವ ಪ್ರಯತ್ನವನ್ನೂ ಮಾಡುತ್ತಿರಲಿಲ್ಲ.

ಅವರು ಕೌಪೀನವನ್ನೂ ಬಿಟ್ಟರು. ಕಾವಿವಸ್ತ್ರವನ್ನೂ ಬಿಟ್ಟರು. ತಾಯಿಯ ಮಡಿಲಲ್ಲಿರುವ ಮುಗ್ಧ ಮಗುವಿನಂತೆ ನಗ್ನವಾಗಿರ ತೊಡಗಿದರು. ಸುತ್ತಮುತ್ತಲ ಜಗತ್ತಿನ ಪರಿವೆ ಅವರಿಗಿರಲಿಲ್ಲ. ಧಾರ್ಮಿಕ ಒಲವಿನಿಂದೊಡಗೂಡಿ ಅಥವಾ ಕುತೂಹಲವಶರಾಗಿ ಅಸಂಖ್ಯ ಜನ ಅವರನ್ನು ಮುತ್ತತೊಡಗಿದರು. ದಿನೇ ದಿನೇ ಸಂದರ್ಶಕರ ಸಂಖ್ಯೆ ಬೆಳೆಯತೊಡಗಿತು. ಕೆಲವರು ಅವರ ಅಭಿ ಮಾನಿಗಳಾದರು, ಶಿಷ್ಯರಾದರು. ಜನಸಂದಣಿಯಿಂದ ತಪ್ಪಿಸಿ ಕೊಳ್ಳಲು ಸ್ವಾಮೀಜಿ ಏಕಾಂತ ಸ್ಥಳಕ್ಕೆ ಹೋಗಬಯಸಿದರು. ಉದಾರಿಯೂ, ಸಜ್ಜನನೂ ಆದ ಅವಧದ ರಾಜನ ವಿನಂತಿಯ ಮೇರೆಗೆ ಅವರು ಆನಂದಬಾಗ್ ಎಂದು ಕರೆಯಲ್ಪಡುವ ಅವನ ವಿಶಾಲವಾದ, ಏಕಾಂತವಾದ ಉದ್ಯಾನದಲ್ಲಿ ವಾಸಿಸಲಾರಂಭಿಸಿ ದರು. ಅದು ಇದ್ದದು ಪವಿತ್ರ ವಾರಣಾಸಿಯಲ್ಲಿಯೇ.

ಅವರ ಅನುಕೂಲಕ್ಕಾಗಿ ರಾಜ ತಕ್ಕ ವ್ಯವಸ್ಥೆಯನ್ನು ಮಾಡಿ ದನು. ಆದರೆ ಅವರಿಗೆ ಯಾವುದೇ ಅಪೇಕ್ಷೆಗಳಿರಲಿಲ್ಲ. ಅವರಿಗೆ ಯಾವುದೇ ಸೇವೆಯ ಅಗತ್ಯವಿರಲಿಲ್ಲ. ಅವರು ತಮ್ಮ ಆನಂದ ಸ್ವರೂಪದಲ್ಲಿ ಪ್ರತಿಷ್ಠಿತರಾಗಿದ್ದು, ತುಂಬಿದ ಸಮುದ್ರದಂತಿದ್ದರು. ಈ ಹೊತ್ತಿಗೆ ಅವರ ಶರೀರವು ಮೂಳೆಚಕ್ಕಳವಾಗಿದ್ದರೂ, ಅದು ಬಾಹ್ಯ ಪರಿಸರದ ಶೀತೋಷ್ಣಗಳನ್ನು ಸಹಿಸಬಲ್ಲುದಾಗಿತ್ತು.

ಅವರು ಸಮಾಜದ ದೃಷ್ಟಿಯಿಂದ ಗುಪ್ತವಾಗಿ ಇರಬಯಸಿ ದರೂ, ಅವರ ಅಪಾರ ಕರುಣೆ, ದಿವ್ಯಗುಣಗಳು ಹಾಗೂ ಮಹಿಮಾಪೂರ್ಣ ಆತ್ಮಶ್ರೀಯಿಂದಾಗಿ, ಜಾತಿ-ಮತ-ಪಂಥ -ಲಿಂಗ ಬೇಧವಿಲ್ಲದೆ ಸಮಾಜದ ಎಲ್ಲ ಬಗೆಯ ಜನ ಅವರಿಂದ ಆಕರ್ಷಿತರಾದರು. ಅವರ ಮಹಾಸಮಾಧಿಗೆ ಕೆಲವು ವರ್ಷಗಳ ಮೊದಲು ಅವರು ಇಡೀ ವಾರಣಾಸಿಯ ಗಮನವನ್ನು ಸೆಳೆದಿ ದ್ದರು. ತ್ರೈಲಂಗ ಸ್ವಾಮಿಗಳ ತರುವಾಯ ಅವರು ವಾರಣಾಸಿಯ ಸಂತಶ್ರೇಷ್ಠರಾಗಿದ್ದರು. ರಾಜ-ಮಹಾರಾಜರು, ಜಮೀನ್ದಾರರು, ವ್ಯಾಪಾರಿಗಳು, ಉನ್ನತ ಅಧಿಕಾರಿ ವರ್ಗದವರು, ಭಿಕ್ಷುಗಳು ಸಾಧುಗಳು, ಯಾತ್ರಿಗಳು, ಆರ್ತರು, ದುಃಖಿಗಳು, ಜಿಜ್ಞಾಸು ಗಳು — ಎಲ್ಲರೂ ಅವರ ದರ್ಶನಕ್ಕಾಗಿ ಹಾತೊರೆಯುತ್ತಿದ್ದರು. ಯೂರೋಪಿಯನ್ನರು, ಅಮೇರಿಕನ್ನರು ತಮಗೆ ಗೊತ್ತಿಲ್ಲದ ಯಾವುದೋ ಕಾರಣಕ್ಕೆ ಭಾರತದ ಈ ನಗ್ನ ಸಂನ್ಯಾಸಿಯಿಂದ ಆಕ ರ್ಷಿತರಾಗಿದ್ದರು. ವಿದೇಶದಿಂದ ಆಗಮಿಸಿದ ಯಾತ್ರಿಗಳು ಅವ ರನ್ನು ಸಂದರ್ಶಿಸದೆ ಹೋಗುತ್ತಿರಲಿಲ್ಲ. ಸ್ವಾಮಿ ವಿವೇಕಾನಂದರು ತಮ್ಮ ಪರಿವ್ರಜನದ ಕಾಲದಲ್ಲಿ ವಾರಣಾಸಿಗೆ ಹೋದಾಗ ಸ್ವಾಮಿ ಭಾಸ್ಕರಾನಂದರನ್ನು ಭೇಟಿಯಾಗಿದ್ದರು. ಶ್ರೀಮಾತೆ ಶ್ರೀ ಶಾರದಾ ದೇವಿಯವರು ವಾರಣಾಸಿಗೆ ಹೋದಾಗ ಸ್ವಾಮಿ ಭಾಸ್ಕರಾ

ನಂದರನ್ನು ಭೇಟಿಯಾಗಿದ್ದರು. ಶ್ರೀಮಾತೆಯವರು ಅವರನ್ನು ಕುರಿತು, ''ಎಂಥ ನಿರ್ವಿಕಾರ ಮಹಾಪುರುಷರು! '' ಎಂದು ಉದ್ಗರಿಸುತ್ತಾರೆ.

ಅವರ ಮಹಿಮಾನ್ವಿತ ಕಥೆಯು ಭಾರತದ ವೃತ್ತಪತ್ರಿಕೆಗಳಲ್ಲಿ ಮಾತ್ರವಲ್ಲ, ಯೂರೋಪ್-ಅಮೆರಿಕಗಳ ಪತ್ರಿಕೆಗಳಲ್ಲೂ ಪ್ರಕಟವಾಯಿತು. ಭಾರತ ಪ್ರವಾಸಕ್ಕೆಂದು ಆಗಮಿಸಿದ ಅಮೆರಿಕದ ಖ್ಯಾತ ಬರಹಗಾರ ಮಾರ್ಕ ಟ್ವೇನ್ ಅವರನ್ನು ಕುರಿತು ಸವಿಸ್ತಾರವಾಗಿ ಬರೆದನು. ನೀವು ಭಾರತದಲ್ಲಿ ದರ್ಶಿಸಿದ ಗಮನಾರ್ಹವಾದ ವಸ್ತು ಯಾವುದು ಎಂದು ಅವನನ್ನು ಪ್ರಶ್ನಿಸಿದಾಗ ಅವನು, ''ನಾನು ನೋಡಿದ ವಿಶಿಷ್ಟ ವಸ್ತು ಬನಾರಸ್ ಮತ್ತು ಅಲ್ಲಿ ನಾನು ಭೇಟಿಯಾದ ಸಂತ... ತನ್ನ ಪಾವಿತ್ರ್ಯದಿಂದ ಅವನು ಭಾರತದ ಉದ್ದಗಲಕ್ಕೂ ಪೂಜಿಸಲ್ಪಡುತ್ತಿರುವ ವ್ಯಕ್ತಿ ಅವನು'' ಎನ್ನುತ್ತಾನೆ.

ಓರ್ವ ಆಂಗ್ಲ ಮಹಿಳೆ, ಅವರ ಅಭಿಮಾನಿ, ಅವರ ಮಹಾಸಮಾಧಿಯ ವಿಷಯವನ್ನು ಕೇಳಿ ಬರೆಯುತ್ತಾಳೆ: ''ಸ್ವಾಮಿ ಭಾಸ್ಕರಾನಂದರದು ಮಧ್ಯಮ ಗಾತ್ರ, ಮುಂಡನಗೈದ ಶಿರ, ಹಲ್ಲುಗಳಿಲ್ಲದ ಬೊಚ್ಚು ಬಾಯಿ, ನಗ್ನ ಶರೀರ. ಅವರ ಶರೀರದ ಪ್ರತಿಯೊಂದು ಮೂಳೆಯೂ ಎದ್ದು ಕಾಣುತ್ತಿತ್ತು. ಆದರೆ ಅವರಲ್ಲಿ ಅಸಾಮಾನ್ಯ ರಾಜಗಾಂಭೀರ್ಯವೂ, ಅಪಾರ ಸೌಜನ್ಯವೂ, ಪರಮ ಪರಿಶುದ್ಧವಾದ ಸರಳತೆಯೂ ಆವಿರ್ಭವಿಸಿತ್ತು. ಅಂತಹ ವ್ಯಕ್ತಿಗಳಲ್ಲಿ ನಾವು ಊಹಿಸಬಹುದಾದ ಅಭಿಮಾನದ ಅಥವಾ ಪೊಳ್ಳು ವಿನಯದ ಲಕ್ಷಣಗಳು ಅವರಲ್ಲಿರಲಿಲ್ಲ. ಬದಲಾಗಿ ಅವರ ದೀಪ್ತ ಮುಖದಲ್ಲಿ ಕೃಪಾಪೂರ್ಣ ಸತ್ವವಿದ್ದಿತು. ಅದು ಅವರ ಒಳಗಿನ ಪೂರ್ಣ ತೃಪ್ತಿಯ ಸೂಚಕವಾಗಿತ್ತು.... ಜಡ ಜಗತ್ತಿನ ಮೇಲೆ ಆತ್ಮದ ಪ್ರಭುತ್ವಕ್ಕೆ ಅವರೊಂದು ಜೀವಂತ ಉದಾಹರಣೆಯಾಗಿದ್ದರು. ಅವರ ಅಪಾರ ತಪೋನಿಷ್ಠೆಯು ಮಾನವತೆಗೆ ವರದಾನವಾಗಿತ್ತು.'' *(ಕೃಪೆ: ಕಲ್ಯಾಣ ಕಲ್ಪತರು – ಜುಲೈ ೨೦೧೨)*



## ಭ್ರಾತೃಪ್ರೇಮ

ಸ್ವಾಮಿ ವಿವೇಕಾನಂದರು ಮೊದಲ ಸಾರಿ ವಿಲಾಯಿತಿಯಿಂದ ಹಿಂದಿರುಗಿ ಬಂದು ಕೆಲವು ದಿವಸ ಕಾಶೀಪುರದ ಗೋಪಾಲಲಾಲ ತೋಟದಲ್ಲಿ ಇದ್ದರು. ಸ್ವಾಮೀಜಿಯವರ ಪ್ರಖ್ಯಾತಿ ಆಗ ಭರತಖಂಡದ ಒಂದು ತುದಿಯಿಂದ ಮತ್ತೊಂದು ತುದಿಯವರೆಗೂ ಪ್ರತಿಧ್ವನಿತವಾಗುತ್ತಿತ್ತು. ಕಲ್ಕತ್ತೆಯ ಬಡೋಬಜಾರಿನಲ್ಲಿ ಬಹಳ ಮಂದಿ ಪಂಡಿತರು ವಾಸಿಸುತ್ತಿದ್ದರು. ಈ ವೇದಶಾಸ್ತ್ರಜ್ಞರಾದ ಪಂಡಿತರೆಲ್ಲಾ ಈ ಕಾಲದಲ್ಲಿ ಸ್ವಾಮಿಗಳ ಕೀರ್ತನೆಯನ್ನು ಕೇಳಿದ್ದರು. ಅವರಲ್ಲಿ ಕೆಲವರು ದೊಡ್ಡ ಪಂಡಿತರು ಸ್ವಾಮಿಗಳೊಡನೆ ವಾಕ್ಯಾರ್ಥ ಮಾಡುವ ಅಭಿಲಾಷೆಯಿಂದ ಒಂದು ದಿನ ಈ ತೋಟಕ್ಕೆ ಬಂದರು. ಬಂದಿದ್ದ ಪಂಡಿತರೆಲ್ಲಾ ಸಂಸ್ಕೃತ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುವ ಸಾಮರ್ಥ್ಯವುಳ್ಳವರಾಗಿದ್ದರು. ಅವರು ಬಂದಕೂಡಲೆ ಗುಂಪಿನಿಂದ ಸುತ್ತುವರಿಯಲ್ಪಟ್ಟಿದ್ದ ಸ್ವಾಮಿಗಳನ್ನು ಮಾತನಾಡಿಸಿ ಅವರೊಡನೆ ಸಂಸ್ಕೃತದಲ್ಲಿ ಮಾತು ಮೊದಲು ಮಾಡಿದರು. ಸ್ವಾಮೀಜಿ ಸಂಸ್ಕೃತದಲ್ಲಿಯೇ ಅವರಿಗೆ ಉತ್ತರ ಕೊಡುತ್ತಿದ್ದರು. ಸ್ವಾಮೀಜಿಯವರು ಹಿಂದೆ ಆರು ವರ್ಷಗಳ ಕಾಲ ಯುರೋಪ್ ಮತ್ತು ಅಮೆರಿಕಾದಲ್ಲಿ ಇದ್ದಾಗ ಸಂಸ್ಕೃತ ಮಾತನಾಡುವುದಕ್ಕೆ ಅವಕಾಶ ದೊರೆಯದಿದ್ದರೂ, ಈಗ ಅವರ ಸಂಸ್ಕೃತ ನುಡಿಗಳು ಪಂಡಿತರ ಮಾತಿಗಿಂತ ಕಿವಿಗೆ ಇಂಪಾಗಿಯೂ, ಸುಲಲಿತವಾಗಿಯೂ ಇತ್ತೆಂದು ಸ್ವತಃ ಪಂಡಿತರೇ ನಂತರ ಒಪ್ಪಿಕೊಂಡರು.

ಪಂಡಿತರೊಡನೆ ಸ್ವಾಮಿಗಳಿಗೆ ಜಟಿಲ ವಿಚಾರ ಹತ್ತಿಕೊಂಡಾಗ, ಅವರು ಕುಳಿತಿದ್ದ ತೊಟ್ಟಿಗೆ ಉತ್ತರದಲ್ಲಿದ್ದ ಕೊಠಡಿಯಲ್ಲಿ ರಾಮಕೃಷ್ಣಾನಂದ ಸ್ವಾಮಿಗಳು ಜಪಮಾಡುತ್ತಿದ್ದರು. ಪಂಡಿತರೆಲ್ಲರೂ ಹೊರಟುಹೋದ ಮೇಲೆ ಇದಕ್ಕೆ ಕಾರಣವನ್ನು ವಿಚಾರ ಮಾಡಿದಾಗ, ಸ್ವಾಮಿಗಳಿಗೆ ವಿಜಯವಾಗುವುದಕ್ಕಾಗಿಯೆ ಒಂದೇ ಮನಸ್ಸಿನಿಂದ ಪರಮಹಂಸರ ಪಾದಪದ್ಮದಲ್ಲಿ ಅವರು ಪ್ರಾರ್ಥನೆ ಮಾಡುತ್ತಿದ್ದರೆಂದು ತಿಳಿದು ಬಂತು!

ಸ್ವಾಮೀಜಿಯವರ ಮೇಲೆ ಅವರ ಗುರುಭ್ರಾತೃಗಳಿಗೆ ಯಾವಾಗಲೂ ಎಂಥ ಅದ್ಭುತವಾದ ಪ್ರೀತಿ ಇರುತ್ತಿತ್ತು !

*(ಸಂಗ್ರಹ: ಸ್ವರ್ಣಗೌರಿ)*

# ಆತ್ಮವನ್ನು ತಿಳಿದುಕೊಳ್ಳುವುದು ಹೇಗೆ?

## (ಕೇನೋಪನಿಷತ್ತಿನ ಕತೆ)

ಸ್ವಾಮಿ ವೀರೇಶಾನಂದ



ಕೇನೋಪನಿಷತ್ತು ಸಾಮವೇದದ ಒಂದು ಅಂಗವಾಗಿದೆ. ಸಾಮವೇದದ ತಲವಕಾರ ಬ್ರಾಹ್ಮಣದಲ್ಲಿ ಈ ಉಪನಿಷತ್ತು ಬರುತ್ತದೆ.

### ಅರಿತಿರುವುದು, ಅರಿಯದ್ದು - ಇವುಗಳಿಗಿಂತ ಭಿನ್ನ

ಶಿಷ್ಯನೊಬ್ಬ ಗುರುವಿನ ಹತ್ತಿರ ಬರುತ್ತಾನೆ. ಗುರುವಿನ ಮುಂದೆ ಬಹಳ ಮುಖ್ಯವಾದ ಪ್ರಶ್ನೆಯೊಂದನ್ನು ಕೇಳುತ್ತಾನೆ. ಆತ್ಮಜ್ಞಾನವಲ್ಲದೆ, ಯಾವುದರಲ್ಲಿಯೂ ತನಗೆ ಪುರುಷಾರ್ಥ ಲಭಿಸದು ಎಂಬ ಅಚಲವಾದ ನಿಷ್ಠೆಯನ್ನು ಅವನು ಇಟ್ಟುಕೊಂಡಿದ್ದಾನೆ. ಹೀಗಾಗಿ ಬ್ರಹ್ಮನಿಷ್ಠನೂ, ಶಾಸ್ತ್ರವೇತ್ತನೂ, ಕರುಣಾಸಾಗರನೂ ಆದ ಒಬ್ಬ ಗುರುವಿನ ಹತ್ತಿರ ಬಂದಿದ್ದಾನೆ. ಅವನ ಮನಸ್ಸಿನಲ್ಲಿ ಇರುವ ಇಚ್ಛೆ ಇದು: ತಾನು ಭಯರಹಿತವಾದ, ನಿತ್ಯವಾದ ಮತ್ತು ಮಂಗಳಕರವಾದ, ಯಾವ ಮಾರ್ಪಾಡುಗಳೂ ಇಲ್ಲದ ತತ್ತ್ವವನ್ನು ತಿಳಿದುಕೊಳ್ಳಬೇಕು; ಆ ಮೂಲಕ ಕೃತಾರ್ಥನಾಗಬೇಕು ಎಂದು. ಹೀಗಾಗಿ ಶಿಷ್ಯನು ನಿಜವಾದ ಜಿಜ್ಞಾಸುವೂ, ಮುಮುಕ್ಷುವೂ ಆಗಿದ್ದಾನೆ. ಅದಕ್ಕೆ ಸರಿಹೊಂದುವಂತೆ ಗುರುವು ಶ್ರೋತ್ರಿಯನೂ, ಪಾಪರಹಿತನೂ, ಕಾಮರಹಿತನೂ, ಬ್ರಹ್ಮನಿಷ್ಠನೂ ಆಗಿದ್ದಾನೆ. ಚೆನ್ನಾಗಿ ಒಣಗಿರುವ ಎರಡು ಕಟ್ಟಿಗೆಯ ತುಂಡುಗಳ ಮಧ್ಯೆ ಘರ್ಷಣೆ ಉಂಟಾದಾಗ, ಅಗ್ನಿ ಉತ್ಪತ್ತಿ ಆಗುತ್ತದೆ, ಅಲ್ಲವೆ? ಅದೇ ರೀತಿ, ಸದ್ಗುಣ ಸಂಪನ್ನನಾದ ಶಿಷ್ಯ ಮತ್ತು ಬ್ರಹ್ಮವೇತ್ತರಾದ ಗುರುಗಳ ನಡುವೆ ಸಂಪರ್ಕ ಉಂಟಾದಾಗ, ವಿದ್ಯಾಪ್ರದಾನವು ಸುಸೂತ್ರವಾಗಿ ಆಗುತ್ತದೆ.

ಶಿಷ್ಯನು ಕೇಳಿದ ಪ್ರಶ್ನೆ ಬಹಳ ಗಹನವಾದುದು; ಚಾತುರ್ಯದಿಂದ ಕೂಡಿದ್ದು. ಅವನು ಹೀಗೆ ಕೇಳುತ್ತಾನೆ: ''ಯಾರ ಇಷ್ಟವನ್ನು

ಅನುಸರಿಸಿ, ತನ್ನ ವಿಷಯದ ಕಡೆಗೆ ಮನಸ್ಸು ಎರಗುತ್ತದೆ? ಹಾಗೆಯೇ ಯಾರಿಂದ ಪ್ರೇರೇಪಿತವಾಗಿ ಪ್ರಾಣವೇ ಸೇರಿದಂತೆ ಸರ್ವೇಂದ್ರಿಯಗಳೂ ತಮ್ಮ ತಮ್ಮ ಕೆಲಸದಲ್ಲಿ ತೊಡಗುತ್ತವೆ? ಯಾರ ಇಚ್ಛೆಯ ಅನುಸಾರವಾಗಿ ಶಬ್ದರೂಪವಾದ ಮಾತುಗಳನ್ನು ಜನರು ಆಡುತ್ತಿರುವರು? ಹಾಗೆಯೇ ಚಕ್ಷುರಿಂದ್ರಿಯವಾದ ಕಣ್ಣನ್ನು ರೂಪದಲ್ಲಿಯೂ ಶ್ರೋತ್ರೇಂದ್ರಿಯವಾದ ಕಿವಿಯನ್ನು ಶಬ್ದದಲ್ಲಿಯೂ, ಯಾವ ಚೈತನ್ಯಪ್ರಕಾಶವುಳ್ಳ ದೇವನು ಪ್ರೇರೇಪಿಸುತ್ತಿರುವನು?''

ಹೀಗೆ ಕೇಳಿದ ಶಿಷ್ಯನಿಗೆ ಗುರುವು ಉತ್ತರಿಸಿದನು: ''ಮಗೂ, ಮನಸ್ಸು ಮುಂತಾದವು ಸೇರಿ ಇಂದ್ರಿಯಸಮೂಹವೆನಿಸುತ್ತದೆ. ಮನಸ್ಸು ಅಂತರಿಂದ್ರಿಯವಾದರೆ, ಉಳಿದ ಇಂದ್ರಿಯಗಳು ಬಹಿರಿಂದ್ರಿಯಗಳು. ಇವುಗಳನ್ನು ಯಾವ ಚೈತನ್ಯಸ್ವರೂಪಿಯಾದ ದೇವನು ಆಯಾ ಇಂದ್ರಿಯಗಳ ಕಡೆಗೆ ಪ್ರೇರಿಸಿ ಕಳಿಸುತ್ತಾನೆ? ಹಾಗೂ ಅವುಗಳನ್ನು ಹಾಗೆ ಮಾಡುವಂತೆ ಪ್ರೇರೇಪಿಸುತ್ತಿದ್ದಾನೆ? ಇದೇ ಅಲ್ಲವೇ ನಿನ್ನ ಪ್ರಶ್ನೆಯ ಅಂತರಾರ್ಥ? ಅದನ್ನು ನಾನು ನಿನಗೆ ಹೇಳುತ್ತೇನೆ, ಕೇಳು.''

ಗುರುವು ಮುಂದುವರೆಯುತ್ತಾನೆ: ''ಈ ಆತ್ಮಸ್ವರೂಪವಾದ ಬ್ರಹ್ಮವು ಇಂದ್ರಿಯಗಳಿಗೂ ಚೈತನ್ಯದಾಯಕವಾಗಿದೆ; ಪ್ರೇರಣಾ ಶಕ್ತಿಯಾಗಿದೆ. ಹೀಗಾಗಿ ಅವುಗಳ ಮೂಲಕ ಬ್ರಹ್ಮತತ್ತ್ವವನ್ನು ಅರಿಯಲು ಸಾಧ್ಯವಿಲ್ಲ. ಶ್ರೋತ್ರೇಂದ್ರಿಯವು ಇದನ್ನು ಗ್ರಹಿಸಲು ಸಾಧ್ಯವಿಲ್ಲ. ಏಕೆ ಗೊತ್ತೆ? ಈ ಬ್ರಹ್ಮತತ್ತ್ವವು ಇದರ ಆತ್ಮವೇ ಆಗಿದೆ. ಹಾಗೆಯೇ ವಾಕ್ಕು ಕೂಡ. ಬ್ರಹ್ಮತತ್ತ್ವವು ಮಾತಿನ ಆತ್ಮವೂ ಕೂಡ. ಇಲ್ಲಿ, ಆತ್ಮ ಎಂದರೆ, ಕೇಳುವುದು, ನೋಡುವುದು, ಮಾತನಾಡುವುದು - ಇವುಗಳೆಲ್ಲವನ್ನೂ ಬೆಳಗುವ ಚೈತನ್ಯಸ್ವರೂಪ ಎಂದರ್ಥ. ಇದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ಅಗ್ನಿಯು ತನಗಿಂತ ಬೇರೆಯ ವಸ್ತುವನ್ನು ಸುಡುತ್ತದೆ, ಇಲ್ಲವೇ ಪ್ರಕಾಶಿಸುತ್ತದೆ - ಅಲ್ಲವೆ? ಅದು ತನ್ನನ್ನೇ ತಾನು ಸುಡುವುದೋ, ಇಲ್ಲವೇ ಪ್ರಕಾಶಿಸುವುದೋ - ಮಾಡಿಕೊಳ್ಳುವುದಿಲ್ಲ, ಅಲ್ಲವೆ? ಇದೇ ರೀತಿ ಮನಸ್ಸು ಕೂಡ. ಮನಸ್ಸು ಬೇರೆ ಎಲ್ಲದರ ಆಲೋಚನೆ ಮಾಡುತ್ತದೆ, ಬೇರೆ ಎಲ್ಲವನ್ನೂ ನಿರ್ಧರಿಸುತ್ತದೆ. ಬ್ರಹ್ಮವು ಅದರ ಆತ್ಮವೂ ಆಗಿದೆ, ಅಲ್ಲವೆ? ಹೀಗಾಗಿ ಮನಸ್ಸು ಬ್ರಹ್ಮರೂಪವನ್ನು ಗ್ರಹಿಸಲು ಸಾಧ್ಯವಿಲ್ಲ.

''ಮಗೂ, ಇಂದ್ರಿಯಗಳು ಮತ್ತು ಮನಸ್ಸಿನ ಸಹಾಯದಿಂದಷ್ಟೇ ಒಂದು ವಸ್ತುವನ್ನು ತಿಳಿದುಕೊಳ್ಳಲು ಸಾಧ್ಯ. ಆತ್ಮಸ್ವರೂಪವು ಅವುಗಳಿಂದ ತಿಳಿದುಬರುವುದಿಲ್ಲ. ಹೀಗಾಗಿ ಈ ಬ್ರಹ್ಮವನ್ನು ಹೀಗೆ ಉಪದೇಶಿಸಬೇಕು ಎಂದು ನಾವು ಸಂದಿಗ್ಧಕ್ಕೆ ಒಳಗಾಗಿದ್ದೇವೆ. ಹೀಗಾಗಿ ಈ ಆತ್ಮತತ್ತ್ವವು ಉಪದೇಶಿಸಲೂ ಕಷ್ಟಸಾಧ್ಯವಾದುದು, ತಿಳಿದುಕೊಳ್ಳಲೂ ದುರ್ಭೇದ್ಯವಾದುದು. ಆದರೂ ಬೇರೆ ಯಾವ ವಿಧಾನದಿಂದಲೂ ಬ್ರಹ್ಮವಸ್ತುವನ್ನು ಅರಿಯಲು ಅಸಾಧ್ಯ. ಅದನ್ನು ಶಾಸ್ತ್ರೋಪದೇಶದಿಂದಲೇ ತಿಳಿದುಕೊಳ್ಳಬೇಕು. ಅಂಥ ಉಪದೇಶವನ್ನು ಗುರುಗಳೇ ಮಾಡಬೇಕು.

''ಅಂಥ ಶಾಸ್ತ್ರೋಪದೇಶ ಅದಾವುದು ಎಂದು ಕೇಳುವೆಯೇನು? ನಾವು ನಮ್ಮ ಹಿರಿಯರಿಂದ ಕೇಳಿದ ಮಾತನ್ನು ನಿನಗೆ ಹೇಳುತ್ತಿದ್ದೇವೆ. ಅವರು ಈ ವಿಷಯವನ್ನು ನಮಗೆ ಚೆನ್ನಾಗಿ ವಿವರಿಸಿ ಹೇಳಿದ್ದಾರೆ. ಇದೊಂದು ಬಹುಮುಖ್ಯವಾದ ಸೂತ್ರರೂಪದ ಉಪದೇಶ. ಅದೇನು ಗೊತ್ತೆ? – **ಅನ್ಯದೇವ ತತ್ ವಿದಿತಾತ್ ಅಥೋ ಅವಿದಿತಾತ್ ಅಧಿ.** ಅಂದರೆ, ಈ ಆತ್ಮತತ್ತ್ವವು 'ತಿಳಿದುಕೊಂಡಿರುವುದಕ್ಕಿಂತ ಬೇರೆ; ಅದೇ ಸಮಯದಲ್ಲಿ ತಿಳಿಯದೆ ಇರುವುದಕ್ಕಿಂತಲೂ ಹೆಚ್ಚಿನದು.' ಮಗು, ತಿಳಿದುಕೊಂಡಿರುವುದು ಎಂದರೆ, ಇಂದ್ರಿಯಗಳು ಮತ್ತು ಮನಸ್ಸಿನಿಂದ ತಿಳಿದುಕೊಂಡಿರುವ ಸಂಗತಿಗಳು. ಬ್ರಹ್ಮ ಅಥವಾ ಆತ್ಮತತ್ತ್ವವು ಅವುಗಳಿಂದ ಭಿನ್ನವಾದುದು. ಯಾವುದು ಜಗತ್ತಿನ ರೂಪದಲ್ಲಿ ವ್ಯಾಕೃತವಾಗಿದೆಯೋ (ಅನುಭವಕ್ಕೆ ಬರುವುದೋ) ಅವುಗಳನ್ನು ತಿಳಿದುಕೊಳ್ಳಬಹುದು, ಅಲ್ಲವೇ. ಅದಕ್ಕಿಂತ ಬೇರೆಯಾದುದು ಎಂದರ್ಥ. ಹಾಗೆಯೇ, ಈ ವ್ಯಾಕೃತವಾದ ಜಗತ್ತಿಗೆ ಕಾರಣವಾದ ಬೀಜರೂಪದ ಅವ್ಯಾಕೃತಕ್ಕಿಂತಲೂ ಇದು ಬೇರೆ. ಒಟ್ಟಾರೆ, ಈ ಬ್ರಹ್ಮತತ್ತ್ವವು ಪ್ರಪಂಚರೂಪದ ವೃಕ್ಷವೂ ಅಲ್ಲ, ಅದರ ಕಾರಣವಾದ ಬೀಜವೂ ಅಲ್ಲ. ಅದಕ್ಕಿಂತ ಮೀರಿರುವುದು ಎಂದು ಇದರ ಅರ್ಥ. ಇದನ್ನು ಇನ್ನೊಂದು ರೀತಿಯೂ ಅರ್ಥ ಮಾಡಬಹುದು. ಆತ್ಮವನ್ನು ಬೇರೆ ಕಡೆಯಿಂದ ಪಡೆದುಕೊಳ್ಳಲಾಗದು, ಅದೇ ರೀತಿ ತಿರಸ್ಕರಿಸಲೂ ಸಾಧ್ಯವಿಲ್ಲ. ಅಂಥ ವಸ್ತು ನಮ್ಮ ಆತ್ಮಕ್ಕಿಂತ ಬೇರೆಯಾಗಿರುವುದು ಸಾಧ್ಯವೇ ಇಲ್ಲ. ಹಾಗೆಂದೇ **ಅಯಮಾತ್ಮಾ ಬ್ರಹ್ಮ** — ಈ ಆತ್ಮವೇ ಬ್ರಹ್ಮ ಎಂದು ಉಪನಿಷತ್ತುಗಳು ಹೇಳುವುದು, ತಿಳಿಯಿತೆ?''

## ಎಲ್ಲವೂ ಅನುಭವವಾಗುವ ಚೈತನ್ಯಶಕ್ತಿ

''ಚೈತನ್ಯ ಜ್ಯೋತಿ ಮಾತ್ರವಾಗಿರುವ ಈ ತತ್ತ್ವವು ಎಲ್ಲರ ಆತ್ಮವಾಗಿದೆ ಎಂಬ ಈ ಉಪದೇಶವು ಆಚಾರ್ಯರುಗಳ ಪರಂಪರೆಯಿಂದ ಬಂದದ್ದು. ಬ್ರಹ್ಮತತ್ತ್ವವನ್ನು ಹೀಗೆ ಆಚಾರ್ಯರ ಪರಂಪರೆಯಿಂದ ತಿಳಿದುಕೊಳ್ಳಬಹುದೇ ಹೊರತು, ಬರಿಯ ಅಧ್ಯಯನದಿಂದಾಗಲಿ, ಸ್ವಂತ ಬುದ್ಧಿಶಕ್ತಿಯಿಂದಾಗಲಿ ತಿಳಿದುಕೊಳ್ಳಲು ಸಾಧ್ಯವಿಲ್ಲ.

''ಇನ್ನು ಈ ಮಹತ್ವದ ಸೂತ್ರವನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುವ ಕೆಲವು ನಿದರ್ಶನಗಳನ್ನು ಹೇಳುತ್ತೇವೆ, ಕೇಳಿಸಿಕೋ:

''ಈ ಆತ್ಮತತ್ತ್ವವನ್ನು ಮಾತುಗಳು ಹೊರಪಡಿಸಲು ಸಾಧ್ಯವಿಲ್ಲ. ಏಕೆ ಗೊತ್ತೆ? ಮಾತು ಹೊರಬರುವುದೇ ಈ ಆತ್ಮತತ್ತ್ವದಿಂದ. ಆ ಆತ್ಮತತ್ತ್ವವೇ ನಿಜವಾದ ಬ್ರಹ್ಮ ಎಂದು ತಿಳಿದುಕೋ. ಬರಿ ಉಪಾಸನೆಗಾಗಿ, ನಾಮ-ರೂಪಗಳನ್ನು ಕೊಟ್ಟು ಪೂಜಿಸುವ,

ಧ್ಯಾನಿಸುವ ದೇವತೆಗಳು, ಈ ಪರಬ್ರಹ್ಮದ ಬೇರೆ ಬೇರೆ ಅಭಿವ್ಯಕ್ತಿಗಳು ಮಾತ್ರ. ಅವೆಲ್ಲವೂ ಇದೇ ಬ್ರಹ್ಮವನ್ನೇ ಗೊತ್ತುಮಾಡಿ ತೋರಿಸುತ್ತವೆ. ಈ ಎಲ್ಲ ದೇವತೆಗಳೂ ಉಪಾಧಿ ಸಹಿತ ಸಗುಣ ಬ್ರಹ್ಮರೂಪಗಳು. ಇವುಗಳ ಆಧಾರವಾಗಿ, ಸಾರಸರ್ವಸ್ವವಾಗಿ ಇರುವುದೇ ಈ ನಿರ್ಗುಣ ಬ್ರಹ್ಮತತ್ತ್ವ. ಇದೇ ರೀತಿ ಈ ಆತ್ಮತತ್ತ್ವವನ್ನು ಮನಸ್ಸು ಚಿಂತಿಸಲು ಸಾಧ್ಯವಿಲ್ಲ. ಏಕೆಂದರೆ ಮನಸ್ಸಿಗೆ ಚಿಂತಿಸುವ ಶಕ್ತಿ ಒದಗಿಬರುವುದೇ ಈ ಆತ್ಮತತ್ತ್ವದಿಂದ, ಇದೇ ನಿಜವಾದ ಬ್ರಹ್ಮಸ್ವರೂಪ. ಉಳಿದ ಉಪಾಸನಾ ರೂಪಗಳಲ್ಲ. ಕಣ್ಣುಗಳು ಇದನ್ನು ನೋಡಲಾರವು. ಏಕೆಂದರೆ, ಕಣ್ಣಿಗೆ ಆ ಶಕ್ತಿ ದೊರಕುವುದೇ ಚೈತನ್ಯಸ್ವರೂಪವಾದ ಈ ಆತ್ಮತತ್ತ್ವದಿಂದ. ಇದನ್ನೇ ನೀನು ಬ್ರಹ್ಮವೆಂದು ತಿಳಿದುಕೊ, ಉಪಾಸನೆ ಮಾಡುವ ರೂಪಗಳನ್ನಲ್ಲ. ಈ ಆತ್ಮತತ್ತ್ವವನ್ನು ಕಿವಿಯಿಂದ ಶಬ್ದದ ಹಾಗೆ ಗ್ರಹಿಸಲು ಸಾಧ್ಯವಿಲ್ಲ. ಏಕೆಂದರೆ, ಇದರಿಂದಲೇ ಆ ಇಂದ್ರಿಯಕ್ಕೆ ಕೇಳುವ ಶಕ್ತಿ ಬಂದಿರುವುದು. ಇದನ್ನೇ ಬ್ರಹ್ಮವೆಂದು ತಿಳಿದುಕೋ. ನೀನು ಪೂಜಿಸುವ, ಧ್ಯಾನಿಸುವ ರೂಪಗಳೆಲ್ಲ ಇದರ ವಿವಿಧ ಅಭಿವ್ಯಕ್ತಿ ರೂಪಗಳಷ್ಟೇ. ಹೀಗೆಯೇ ಮೂಗಿಗೆ ಮೂಸುವ ಶಕ್ತಿ ಬಂದಿರುವುದೂ ಈ ಆತ್ಮತತ್ತ್ವದಿಂದಲೇ. ಹೀಗಾಗಿ ಮೂಗು ಇದನ್ನು ವಾಸನೆಯಂತೆ ಗ್ರಹಿಸಲಾರದು. ಇದನ್ನೇ ನೀನು ನಿಜವಾದ ಬ್ರಹ್ಮವೆಂದು ತಿಳಿದುಕೋ. ಯಾವುದನ್ನು ತನಗಿಂತ ಭಿನ್ನವೆಂದು ಉಪಾಸನೆ ಮಾಡುತ್ತೀಯೋ, ಅದು ಬ್ರಹ್ಮವಲ್ಲ. ನಿನ್ನ ಆತ್ಮವೇ ಬ್ರಹ್ಮ.''

ಗುರುಗಳು ತಮ್ಮ ಉಪದೇಶದ ಮೊದಲ ಭಾಗವನ್ನು ಇಲ್ಲಿಗೆ ಸಮಾಪನಗೊಳಿಸುತ್ತಾರೆ. ಇದರ ಬಗ್ಗೆ ಮನನವನ್ನು ಮಾಡಲು ಶಿಷ್ಯನಿಗೆ ಹೇಳುತ್ತಾರೆ. ಶಿಷ್ಯನು ತಾವು ಮಾಡಿದ ಉಪದೇಶವನ್ನು ಚೆನ್ನಾಗಿ ಮನನ ಮಾಡಿರುವನೆಂದು ಖಚಿತವಾದ ನಂತರ, ಹಲವು ದಿವಸಗಳು ಬಿಟ್ಟುಕೊಂಡು, ಮುಂದಿನ ಭಾಗವನ್ನು ಹೀಗೆ ಉಪದೇಶಿಸುತ್ತಾರೆ. ಗುರುಗಳ ಮನಸ್ಸಿನಲ್ಲಿ ಒಂದು ಸಂದೇಹ ಮೂಡಿತ್ತು. ಬ್ರಹ್ಮವೆಂದರೆ, ಬಿಡುವಂಥದ್ದೂ ಅಲ್ಲ, ತೆಗೆದುಕೊಳ್ಳತಕ್ಕದ್ದೂ ಅಲ್ಲ – ಆತ್ಮವೇ ಬ್ರಹ್ಮ ಎಂದು ಗುರುಗಳು ಉಪದೇಶ ಮಾಡಿದ್ದರಷ್ಟೇ. ಇಷ್ಟು ಕೇಳಿಸಿಕೊಂಡಿದ್ದರಲ್ಲಿಯೇ, 'ನಾನೇ ಬ್ರಹ್ಮ ಎಂದು ಚೆನ್ನಾಗಿ ತಿಳಿದುಕೊಂಡುಬಿಟ್ಟಿದ್ದೇನೆ' ಎಂದು ಶಿಷ್ಯನು ತಪ್ಪಾಗಿ ಗ್ರಹಿಸಬಾರದಷ್ಟೇ. ಆ ತಪ್ಪು ಅಭಿಪ್ರಾಯವನ್ನು ಹೋಗಲಾಡಿಸಲು, ಗುರುಗಳು ತಮ್ಮ ಉಪದೇಶವನ್ನು ಮತ್ತೂ ಸ್ಪಷ್ಟೀಕರಿಸಲು ಆರಂಭಿಸಿದರು:

''ಮಗೂ, ನೀನು ಬ್ರಹ್ಮವನ್ನು ಚೆನ್ನಾಗಿ ಅರಿತುಕೊಂಡಿದ್ದೇನೆ ಎಂದು ಭಾವಿಸುತ್ತೀಯೇನಪ್ಪಾ? ಆ ರೀತಿ ಒಂದು ಹೊರಗಿನ ವಸ್ತುವಿನಂತೆ ಬ್ರಹ್ಮವನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ. ಆ ರೀತಿಯ ತಿಳಿವಳಿಕೆ ತಪ್ಪು. ಹಿಂದೆ ಪ್ರಜಾಪತಿಯು ದೇವತೆಗಳ ರಾಜನಾದ ಇಂದ್ರನಿಗೆ ಮತ್ತು ರಾಕ್ಷಸರ ರಾಜನಾದ ವಿರೋಚನನಿಗೆ ಹೀಗೆ ಉಪದೇಶ ಮಾಡಿದನು: 'ಮಕ್ಕಳೇ ಯಾವ ಈ ಪುರುಷನು ಕಣ್ಣಿನಲ್ಲಿ ಕಾಣಿಸುತ್ತಿರುವನೋ, ಅವನೇ ಆತ್ಮನು' ಎಂದು. ಅಸುರರಾಜ ವಿರೋಚನನೇನೂ ಕಡಮೆಯಿಲ್ಲ. ಅವನು ಪ್ರಜಾಪತಿಯ ಮಗ, ಪಂಡಿತ ಕೂಡ. ಆದರೂ ತನಗೆ ಸಹಜವಾದ ದೇಹವೇ ಆತ್ಮ ಎಂಬ ಭಾವನೆಗೆ ಕಟ್ಟುಬಿದ್ದಿದ್ದನು. ಆ ದೋಷದಿಂದ ಕೂಡಿದ ಅವನು 'ಶರೀರವೇ ಆತ್ಮ' ಎಂದು ಅಪಾರ್ಥವನ್ನು ಮಾಡಿ ಕೊಂಡನು. ಇಂದ್ರ ಆ ದೋಷದ ನಿವಾರಣೆಯನ್ನು ಮಾಡಿಕೊಂಡಿದ್ದನು. ಹೀಗಾಗಿ ಬ್ರಹ್ಮವೇ ಆತ್ಮ ಎಂಬ ನಿಜಾರ್ಥವನ್ನು ತಿಳಿದುಕೊಂಡನು. ಹೀಗಾಗಿ ನೀನು ತಪ್ಪು ತಿಳಿದುಕೊಂಡಿರುವ ಸಾಧ್ಯತೆ ಇದ್ದೇ ಇದೆ. ಹಾಗೆ ಒಂದು ವಿಷಯ ವಸ್ತುವೆಂದು ನೀನು ಬ್ರಹ್ಮವನ್ನು ತಿಳಿದುಕೊಂಡಿದ್ದರೆ, ಅದು ಬ್ರಹ್ಮನ ಬಗೆಗಿನ ಅಲ್ಪವಾದ ತಿಳಿವಳಿಕೆ. ಬ್ರಹ್ಮನಲ್ಲೇನೋ, ಅಲ್ಪ ಅಥವಾ ದೊಡ್ಡದು ಎಂಬ ಭಾಗಗಳಿಲ್ಲ. ಆದರೆ ನಮ್ಮ ಅಭಿಪ್ರಾಯಗಳಲ್ಲಿ ಅಲ್ಪಜ್ಞಾನ, ಸರಿಯಾದ ಜ್ಞಾನ ಎಂಬ ಭೇದ ಇರಬಹುದು. ನಾಮರೂಪ ಸಹಿತವಾದ ಬ್ರಹ್ಮನ ತಿಳಿವಳಿಕೆ ಅಲ್ಪವಾದ ಜ್ಞಾನ. 'ಅದು ನಾಶರಹಿತವಾದದ್ದು, ಚೈತನ್ಯರೂಪವಾದುದು' ಎಂಬ ಜ್ಞಾನವೇ ನಿಜವಾದ ಜ್ಞಾನ.

''ನಾನು ದೇಹ, ನಾನು ಮನಸ್ಸು ಮುಂತಾದ ದೇಹಕ್ಕೆ ಸಂಬಂಧಪಟ್ಟ ಬ್ರಹ್ಮನ ಭಾವನೆಗಳನ್ನೇ ಅಲ್ಪಜ್ಞಾನ ಎಂದು ಕರೆಯಬಹುದು, ಅಷ್ಟುಮಾತ್ರವಲ್ಲ , ಬ್ರಹ್ಮವು ಇಂಥ ದೇವತೆ, ಅದು ನನಗಿಂತ ಭಿನ್ನವಾದುದು, ಅದನ್ನು ನಾನು ಅದು ಬೇರೆಯೆಂದು ಪೂಜಿಸುತ್ತೇನೆ, ಧ್ಯಾನಿಸುತ್ತೇನೆ ಎಂಬ ಅಭಿಪ್ರಾಯ ಕೂಡ ಅಲ್ಪಜ್ಞಾನವೇ. ಇಂಥ ಯಾವ ಸೀಮಿತತೆಯೂ ಇಲ್ಲದ, ಶಾಂತ, ಅನಂತ, ಏಕ ಮತ್ತು ಅದ್ವಿತೀಯವಾಗಿರುವ ನಿತ್ಯಬ್ರಹ್ಮವು ಸಾಧಾರಣ ರೀತಿಯಲ್ಲಿ ತಿಳಿದುಕೊಳ್ಳುವ ವಸ್ತುವಲ್ಲ , ಏಕೆಂದರೆ ಅದು ನಮ್ಮ ಆತ್ಮವೇ. ಅಲ್ಲವೇ ಮಗೂ?''

### ಶಿಷ್ಯನ ನಿಶ್ಚಯಬುದ್ಧಿ

ಶಿಷ್ಯನಿಗೆ ಈಗ ನಿಜವಾಗಿ ಮನವರಿಕೆಯಾಗಲು ಆರಂಭಿಸಿತು. ಬ್ರಹ್ಮವನ್ನು ತಾನು ತಿಳಿದುಕೊಂಡುಬಿಟ್ಟಿದ್ದೇನೆ ಎಂಬ ಭಾವನೆಯೇ ತಪ್ಪು ಎಂಬ ವಿವೇಕ ಉದಯವಾಗತೊಡಗಿತು.

ಗುರುಗಳು ಮತ್ತೂ ಹೇಳಿದರು: ''ಮಗು, ಬ್ರಹ್ಮದ ಬಗ್ಗೆ ನೀನು ವಿಚಾರ ಮಾಡುವುದು ಇನ್ನೂ ಇದೆ. ತದನಂತರವಷ್ಟೇ ನಿನಗೆ ಅದರ ಅರಿವಾಗುತ್ತದೆ'' ಎಂದರು.

ಅಲ್ಲಿಗೆ ಅಂದಿನ ಪಾಠ ಮುಗಿಯಿತು. ಗಂಭೀರ ಜಿಜ್ಞಾಸುವೂ ಮುಮುಕ್ಷುವೂ ಆದ ಶಿಷ್ಯನು ಏಕಾಂತದಲ್ಲಿ ತಪಸ್ಸು , ಮನನಗಳನ್ನು ಮಾಡಲು ಗುರುಗಳ ಒಪ್ಪಿಗೆಯನ್ನು ಕೇಳಿದನು. ಅವರ ಆದೇಶದ ಮೇರೆಗೆ ಏಕಾಂತ ಸ್ಥಳದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ, ಗುರುಗಳು ಹೇಳಿದ ಮಾತುಗಳನ್ನು ಚೆನ್ನಾಗಿ ಆಲೋಚಿಸಿ ನೋಡಿದನು. ಅಷ್ಟೇ ಅಲ್ಲ , ತನ್ನ ಸ್ವಂತ ವಿಚಾರಶಕ್ತಿಯಿಂದ ಮನಸ್ಸಿನಲ್ಲಿ ಅದರ ಸತ್ಯಾಸತ್ಯತೆಯನ್ನು ವಿಶ್ಲೇಷಿಸಿದನು. ಹೆಚ್ಚು ಹೆಚ್ಚು ಆಲೋ

ಚನೆ, ಮನನ ಮಾಡಿದಷ್ಟೂ ಬ್ರಹ್ಮತತ್ತ್ವದ ರಹಸ್ಯ ಹೆಚ್ಚುಹೆಚ್ಚಾಗಿ ಅವನ ಮನಸ್ಸಿನಲ್ಲಿ ಸ್ಫುರಿಸಲಾರಂಭಿಸಿತು. ಶ್ರವಣ, ಮನನಗಳು ನಿದಿಧ್ಯಾಸನದ ಹಂತವನ್ನು ತಲುಪಿದವು. ಅವನು ತನ್ನಾತ್ಮ ಮತ್ತು ಬ್ರಹ್ಮತತ್ತ್ವದ ಅಭೇದವನ್ನು ಕಂಡುಕೊಂಡನು. ಬ್ರಹ್ಮದಲ್ಲಿ ತನ್ಮಯನಾಗಿ, ಬ್ರಹ್ಮಾನುಭವಿಯಾದನು. ಅವನಲ್ಲಿ ಪರಮಾನಂದ ಒಡಮೂಡಿತು, ಕೃತಕೃತ್ಯತೆಯ ಸಂತೃಪ್ತಿಯಿಂದ ಮನಸ್ಸು ತುಂಬಿ ಹೋಯಿತು. ಬ್ರಹ್ಮತೇಜಸ್ಸಿನಿಂದ ಮುಖವು ಸೂರ್ಯನಂತೆ ಬೆಳಗಲಾರಂಭಿಸಿತು. ಬಹಳ ತಿಂಗಳುಗಳಾದ ಮೇಲೆ ಅತ್ಯಂತ ಸಾರ್ಥಕತೆಯ ಭಾವದಿಂದ, ಗುರುಗಳ ಬಳಿಗೆ ಬಂದು ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಶಿಷ್ಯ: ''ಗುರುಗಳೇ, ಬ್ರಹ್ಮವನ್ನು ಈಗ ನಾನು ತಿಳಿದಿದ್ದೇನೆ ಎಂದು ಭಾವಿಸುತ್ತೇನೆ.''

ಗುರು : ''ಅದು ಹೇಗೆ ಮಗು?''

ಶಿಷ್ಯ: ''ಗುರುಗಳೇ, ಕೇಳಿರಿ. ಬ್ರಹ್ಮವನ್ನು ಹೊರಗಿನ ವಸ್ತುವಿನ ಹಾಗೆ ಚೆನ್ನಾಗಿ ತಿಳಿದುಕೊಂಡಿದ್ದೇನೆ ಎಂಬ ಭಾವನೆ ನನ್ನಲ್ಲಿ ಇಲ್ಲ. ಆ ರೀತಿ ಚೆನ್ನಾಗಿ ತಿಳಿದುಕೊಂಡಿದ್ದೇನೆ ಎಂದು ನಾನು ಪರಿಗಣಿಸುವುದೇ ಇಲ್ಲ. ಅದೇ ಸಮಯದಲ್ಲಿ ಬ್ರಹ್ಮವು ನನಗೆ ತಿಳಿಯದು ಎಂಬ ಅಜ್ಞಾನದ ಭಾವನೆಯೂ ನನ್ನಲ್ಲಿ ಇಲ್ಲ. ಏಕೆಂದರೆ, ನಾನು ಆತ್ಮರೂಪವಾದ ಬ್ರಹ್ಮಾನುಭವ ಸಂಪನ್ನನಾಗಿದ್ದೇನೆ.''

ಗುರುಗಳು ಸಂಶಯದ ದನಿಯಲ್ಲಿ ಕೇಳಿದರು : ''ಮಗು, ಇದು ಹೇಗೆ ಸಾಧ್ಯ? ಒಂದು ಕಡೆ, 'ಚೆನ್ನಾಗಿ ಅರಿತುಕೊಂಡಿದ್ದೇನೆ ಎಂದು ನಾನು ಅಂದುಕೊಳ್ಳುವುದಿಲ್ಲ' ಎನ್ನುತ್ತೀಯೆ. ಅದೇ ಸಮಯದಲ್ಲಿ, 'ನನಗೆ ತಿಳಿಯದು ಎಂಬ ಅಜ್ಞಾನದ ಭಾವನೆಯೂ ನನ್ನಲ್ಲಿ ಇಲ್ಲ' ಎನ್ನುತ್ತೀಯೆ. ನಿನ್ನಲ್ಲೇ ನಿನಗೆ ಸಂಶಯವಿದೆ. ಇಲ್ಲವೇ, ನೀನು ಬ್ರಹ್ಮವನ್ನು ವಿಪರೀತವಾಗಿ ಅಂದರೆ ತಪ್ಪಾಗಿ ಗ್ರಹಿಸಿದ್ದೀಯೆ. ಇದು ಹೇಗೆ ನಿಜವಾದ ಜ್ಞಾನವಾಗುತ್ತದೆ?''

ಹೀಗೆ ಗುರುಗಳು 'ಬ್ರಹ್ಮನನ್ನು ನಾನು ತಿಳಿದುಕೊಂಡಿದ್ದೇನೆ' ಎನ್ನುವ ಶಿಷ್ಯನ ನಿಶ್ಚಯ ಬುದ್ಧಿಯನ್ನು ಕದಲಿಸಲು ನೋಡಿದರು. ಆದರೆ ಶಿಷ್ಯನ ನಿಶ್ಚಯ ಬುದ್ಧಿಯು ಕದಲಲಿಲ್ಲ. ಏಕೆಂದರೆ, 'ಬ್ರಹ್ಮವು ತಿಳಿದಿರುವುದಕ್ಕೂ, ತಿಳಿಯದಿರುವುದಕ್ಕೂ ಬೇರೆಯೇ ಆಗಿದೆ' ಎಂಬ ಪ್ರಾಚೀನ ಸಾಂಪ್ರದಾಯಿಕ ಉಪದೇಶವನ್ನು ತನ್ನ ಗುರುಗಳಿಂದ ಕೇಳಿ ತಿಳಿದು, ಅವನು ಅದನ್ನು ಮನನ ನಿದಿಧ್ಯಾಸನಗಳಿಂದ ಕರಗತ ಮಾಡಿಕೊಂಡು, ಅನುಭವಕ್ಕೆ ತಂದುಕೊಂಡಿದ್ದನು; ಬ್ರಹ್ಮಾನಂದ ಪೂರಿತನಾಗಿದ್ದನು. ಆಚಾರ್ಯರ ಉಪದೇಶದೊಂದಿಗೆ, ಮನನದಿಂದ ಉಂಟಾದ ತರ್ಕಬಲ ಮತ್ತು ಅನುಭವಗಳ ಬಲವೂ ಅವನಿಗಿತ್ತು.

ಹೀಗಾಗಿ, ಗುರುಗಳಿಗೆ ಪ್ರಣಾಮ ಮಾಡಿ ಅವನು ಎದ್ದು ನಿಂತನು. ಅಲ್ಲಿಯೇ ಅವನ ಸಹಪಾಠಿಗಳಾದ ಬ್ರಹ್ಮಚಾರಿಗಳೂ ಇದ್ದರು. ತನಗೆ ಬ್ರಹ್ಮವಿದ್ಯೆ ಲಭಿಸಿದೆ ಎಂಬ ದೃಢವಾದ ನಿಶ್ಚಯವನ್ನು ತೋರಿಸುವುದಕ್ಕಾಗಿ ಅವನು ಎಲ್ಲರಿಗೂ ಕೈಮುಗಿದುಕೊಂಡು, ಎಣೆಯಿಲ್ಲದ ಆತ್ಮವಿಶ್ವಾಸದಿಂದ ಹೀಗೆ ಗರ್ಜಿಸಿದನು: ''ನಾವಿಷ್ಟು ಜನ ಬ್ರಹ್ಮಚಾರಿಗಳಿದ್ದೇವೆ. ನಮ್ಮೊಳಗೆ ಯಾವನೇ ಆಗಲಿ, ನಾನು ಮುಂದೆ ಹೇಳುವ ಮಾತಿನ ಮರ್ಮವನ್ನು ಅರಿತುಕೊಳ್ಳಬಲ್ಲನೋ, ಅವನು ಮಾತ್ರವೇ ಬ್ರಹ್ಮವನ್ನು ಅರಿತುಕೊಳ್ಳಬಲ್ಲನು. ಅದು ನನಗೆ ಸಿದ್ಧಿಸಿದೆ. ಈ ಮಾತನ್ನು ಕೇಳಿಸಿಕೊಳ್ಳಿರಿ. ನನ್ನ ಅನುಭವದ ಮಾತಿದು. ಇದರಲ್ಲಿ ನಿಮಗೆ ಸಂದೇಹ ಇರಕೂಡದು: '**ನೋ ನ ವೇದೇತಿ ವೇದ ಚ**' – 'ನಾನು ಅರಿತಿಲ್ಲ ಎಂಬುದಿಲ್ಲ , ನಾನು ಖಂಡಿತ ಅರಿತಿದ್ದೇನೆ.' ಗುರುಗಳು ನನಗೆ ಹಿಂದೆ ಹೇಳಿಕೊಟ್ಟರಷ್ಟೇ, 'ಬ್ರಹ್ಮವು ತಿಳಿದಿರುವುದಕ್ಕೂ, ತಿಳಿಯದಿರುವುದಕ್ಕೂ ಬೇರೆ' ಎಂದು. ಅದನ್ನೇ ನಾನು ಅನುಭವಕ್ಕೆ ತಂದುಕೊಂಡು, ನನ್ನ ಆತ್ಮವೇ ಬ್ರಹ್ಮ ಎಂಬ ಸಾಕ್ಷಾತ್ಕಾರವನ್ನು ಪಡೆದುಕೊಂಡಿದ್ದೇನೆ. ಏಕೆಂದರೆ ಆತ್ಮವನ್ನು ಬೇರೆಯ ವಿಷಯವಸ್ತುಗಳಂತೆ ತಿಳಿದುಕೊಳ್ಳಲು ಸಾಧ್ಯವಿಲ್ಲ. ಅದೇ ಸಮಯದಲ್ಲಿ ಆತ್ಮವಾದ್ದರಿಂದ ಅದು ಸ್ವಯಂವೇದ್ಯವಾದುದು. ಹೀಗಾಗಿ ಅದು ತಿಳಿದಿರುವುದೂ ಅಲ್ಲ , ತಿಳಿಯದದ್ದೂ ಅಲ್ಲ. ಅಂಥ ವಸ್ತು ಒಂದಿದ್ದರೆ ಅದು ಆತ್ಮ ಮಾತ್ರ. ಅದೇ ಬ್ರಹ್ಮ ಎಂದು ನನ್ನ ಗುರುಗಳು ನನಗೆ ಬೋಧಿಸಿದ್ದಾರೆ.''

ಗುರುಗಳು ಶಿಷ್ಯನ ಈ ಮಾತನ್ನು ಕೇಳಿಸಿಕೊಂಡು ಸಂತೋಷಪಟ್ಟರು. ತಾನು ಹೇಳಿಕೊಟ್ಟಿದ್ದನ್ನು ಶಿಷ್ಯನು ಸರಿಯಾಗಿ ಗ್ರಹಿಸಿ, ಮನನ ಮಾಡಿ, ಅನುಭವಕ್ಕೆ ತಂದುಕೊಂಡಿದ್ದಾನೆ ಎಂದು ಆನಂದಪಟ್ಟರು. ಹಾಗೆಯೇ ಅವನ ಅನುಭವದ ವಿಷಯದಲ್ಲಿ ಉಳಿದವರ ಸಂದೇಹವೂ ಇದರಿಂದ ಕಳೆಯಿತು. ಉಳಿದ ಶಿಷ್ಯರೆಲ್ಲರೂ, ಬ್ರಹ್ಮವು ಸಾಧಾರಣ ವಿಷಯವಸ್ತುವಿನ ಜ್ಞಾನದಂತೆ ಅಲ್ಲ ಎಂಬ ತಿಳಿವಳಿಕೆಯನ್ನು ಹೊಂದಿದರು. ಬ್ರಹ್ಮವು ಯಾರಿಂದಲೂ ಅರಿಯಲು ಸಾಧ್ಯವಿಲ್ಲ ಎಂಬ ಸಾಧಾರಣ ಜನರ ಗ್ರಹಿಕೆ ಕೂಡ ಇದರಿಂದ ದೂರವಾಯಿತು.

### ಅರಿತೂ ಅರಿಯದಿರುವುದು

ಅತ್ಯಂತ ಗಹನವಾದ ರಹಸ್ಯವನ್ನು ಗುರುಶಿಷ್ಯರ ಸಂವಾದ ರೂಪದಲ್ಲಿ ಬಣ್ಣಿಸಿದ ಉಪನಿಷತ್ತು ಮತ್ತೂ ಮುಂದುವರೆದು ಹೇಳುತ್ತದೆ:

'ಯಾವನಿಗೆ ಆತ್ಮರೂಪಿಯಾದ ಬ್ರಹ್ಮವು ವಿಷಯವಸ್ತುವಿನ ಹಾಗೆ ಎಂಬ ತಪ್ಪುಗ್ರಹಿಕೆ ಇರುವುದಿಲ್ಲವೋ, ಅವನಿಗೆ ಮಾತ್ರ ನಿಜವಾದ ಬ್ರಹ್ಮಜ್ಞಾನವು ಪ್ರಾಪ್ತವಾಗಿರುತ್ತದೆ. ಯಾವನಿಗೆ ಆ ರೀತಿ ತಪ್ಪುಗ್ರಹಿಕೆ ಇರುತ್ತದೋ, ಅವನು ಬ್ರಹ್ಮವನ್ನು ಇನ್ನೂ ತಿಳಿದಿರುವುದಿಲ್ಲ. ಏಕೆಂದರೆ, ಬ್ರಹ್ಮವು ವಿಷಯವಸ್ತುವಲ್ಲ, ಸ್ವಾನುಭವವೇದ್ಯವಾದ ಆತ್ಮವಸ್ತು. ಹೀಗಾಗಿ, '**ಅವಿಜ್ಞಾತಂ ವಿಜಾನತಾಂ, ವಿಜ್ಞಾತಂ ಅವಿಜಾನತಾಂ**' – 'ಅರಿಯುವವರಿಗೆ ಅದು

ತಿಳಿಯದು, ಅರಿವಿಲ್ಲದವರಿಗೆ ಅದು ತಿಳಿದಿದೆ.' ಇಲ್ಲಿ 'ಅರಿವು' ಎಂದರೆ ವಿಷಯವಸ್ತುವನ್ನು ಅರಿಯುವಂಥ ಅರಿವು ಎಂದು ತಿಳಿದುಕೊಳ್ಳಬೇಕು.'

ಹಾಗಾದರೆ ಬ್ರಹ್ಮವನ್ನು ತಿಳಿಯುವುದು ಹೇಗೆ? ಉಪನಿಷತ್ತು ಹೇಳಿಕೊಡುತ್ತದೆ: 'ನಮ್ಮ ಅಂತರಂಗದಲ್ಲಿ ಉಂಟಾಗುವ ಎಲ್ಲ ಚಿಂತನೆಗಳನ್ನು ಅರಿಯುವಾತನು ಆತ್ಮ. ಎಲ್ಲ ಮಾನಸಿಕ ಅಲೆಗಳನ್ನು ನೋಡುವ, ಬೆಳಗುವ ಚೈತನ್ಯಶಕ್ತಿಯಾದ ಅವನು, ಆ ಎಲ್ಲ ಚಿಂತನಾ ಲಹರಿಗಳಲ್ಲಿಯೂ ಸಮಾನವಾಗಿ ತೋರುತ್ತಾನೆ. ಮಾನಸಿಕ ಪ್ರತ್ಯಯಗಳು ಬದಲಾಗುತ್ತ ಇರುತ್ತವೆ. ಆದರೆ ಅವುಗಳನ್ನು ತನ್ನ ಚೈತನ್ಯದಿಂದ ಬೆಳಗುವ ಆತ್ಮನಲ್ಲಿ ಯಾವ ವಿಕಾರವೂ ಉಂಟಾಗುವುದಿಲ್ಲ. ಆತ್ಮನನ್ನು ಈ ಮಾನಸಿಕ ಚಿಂತನೆಯ ಅಲೆಗಳ ಮೂಲಕವೇ ಅರಿಯಲು ಸಾಧ್ಯ. ಬೇರೆ ದಾರಿಯಿಲ್ಲ. ಮನಸ್ಸಿನ ಅಲೆಗಳೆಲ್ಲದರ ಒಳ ಆತ್ಮನೆಂದು ಯಾವಾಗ ನಾವು ಅವನನ್ನು ಅರಿಯುತ್ತೇವೆಯೋ, ಆಗ ಮಾತ್ರ ಅವನನ್ನು ನಿಜವಾಗಿ ಅರಿತಂತೆ ಆಗುತ್ತದೆ. ಇದೇ ಸರಿಯಾದ ದರ್ಶನ. ಇಂಥ ದರ್ಶನವು ತನ್ನ ಸ್ವರೂಪದಲ್ಲಿಯೇ ನಿಲ್ಲುವುದೆಂಬ ಅಮೃತತತ್ವವನ್ನು ನಮಗೆ ತಂದುಕೊಡುತ್ತದೆ. ಅಮೃತತ್ತ್ವವೆಂದರೆ ಸಾವಿಲ್ಲದಿರುವಿಕೆ. ತನ್ನ ಸ್ವರೂಪವು ನಿತ್ಯವಾದ ಆತ್ಮವೆಂದರಿತು, ಅದರಲ್ಲಿಯೇ ತನ್ನ ಇರುವಿಕೆಯನ್ನು ಸಿದ್ಧಪಡಿಸಿಕೊಂಡರೆ ಮತ್ತೆ ಸಾವೆಲ್ಲಿ? ದೇಹಕ್ಕೆ ಮಾತ್ರವೇ ಸಾವು, ಆತ್ಮನಿಗೆ ಅಲ್ಲ, ಅಲ್ಲವೆ?'

ಕಡೆಯದಾಗಿ ಈ ಜನ್ಮದಲ್ಲಿಯೇ ಆತ್ಮವನ್ನು ಅರಿತುಕೊಳ್ಳಲು ಪ್ರಯತ್ನಿಸಬೇಕೆಂಬ ಎಚ್ಚರಿಕೆಯನ್ನು ಉಪನಿಷತ್ತು ಜಿಜ್ಞಾಸುಗಳಿಗೆ ಕೊಡುತ್ತದೆ: 'ದೇವತೆಗಳು, ಮನುಷ್ಯರು, ಮೃಗಗಳು, ಪ್ರೇತಗಳು — ಇವೆಲ್ಲವೂ ಸಂಸಾರದುಃಖದಿಂದ ನರಳುತ್ತಿರುವ ಜೀವಿಗಳೇ. ಅವುಗಳಲ್ಲಿ ಕಂಡುಬರುವ ಹುಟ್ಟು , ಮುಪ್ಪು, ಸಾವು, ಕಾಯಿಲೆ - ಮುಂತಾದವು ಕೂಡ ಅವುಗಳ ಅಜ್ಞಾನದಿಂದಲೇ ಉಂಟಾಗುತ್ತಿರುವುದು. ಹೀಗಾಗಿ ಆತ್ಮವನ್ನು ಈ ಜನ್ಮದಲ್ಲಿಯೇ ಅರಿತುಕೊಂಡರೆ, ಆಗ ಮಾತ್ರ ಒಬ್ಬ ಮನುಷ್ಯನು ನಿತ್ಯನಾಗಲು, ಅಮೃತಸ್ವರೂಪಿಯಾಗಲು ಸಾಧ್ಯ; ಪಾರಮಾರ್ಥಿಕವಾದ ಸತ್ಯವನ್ನು ಕಂಡುಕೊಂಡು, ಸಂಸಾರದುಃಖದಿಂದ ಪಾರಾಗಲು ಸಾಧ್ಯ. ಅದು ಸಾಧ್ಯವಾಗದಿದ್ದರೆ, ದೀರ್ಘಕಾಲದವರೆಗೆ, ಘೋರವಾದ ವಿಪತ್ತನ್ನು ಅವನು ಅನುಭವಿಸಬೇಕಾಗುತ್ತದೆ. ವಿಪತ್ತು ಎಂದರೆ ಯಾವುದು? ಜನ್ಮ-ಮರಣಗಳ ಉರುಳು ಸಂಕೋಲೆಯೇ ಮಹತ್ತಾದ ವಿಪತ್ತು ತಾನೆ? ಆ ಉರುಳುತ್ತಿರುವ ಸಂಸಾರ ಚಕ್ರವೇ ನಮಗೆ ಭಯಂಕರವಾದ ದುಃಖವನ್ನು ಉಂಟುಮಾಡುವುದು ತಾನೆ?'



## ಶ್ರೀರಾಮಕೃಷ್ಣರು ಅಂತರ್ಯಾಮಿ

(ಸ್ವಾಮಿ ಅಭೇದಾನಂದರಿಗಾದ ಅನುಭವ — ಅವರದೇ ಮಾತುಗಳಲ್ಲಿ)

''ಒಂದು ದಿನ ಗೋಲಾಪ್-ಮಾ ಶ್ರೀರಾಮಕೃಷ್ಣರಿಗೆ, ''ಕೊಲ್ಕತ್ತದ ದುರ್ಗಾಚರಣ ಎಂಬವರು ಪ್ರಖ್ಯಾತ ವೈದ್ಯರು. ಅವರು ನಿಮಗೆ ಒಳ್ಳೆಯ ಔಷಧಿ ಕೊಟ್ಟು ಗುಣಪಡಿಸಬಹುದು'' ಎಂದಳು. ತಕ್ಷಣ ಶ್ರೀರಾಮಕೃಷ್ಣರು ಆ ವೈದ್ಯರನ್ನು ನೋಡಲು ಒಪ್ಪಿಕೊಂಡರು. ಆ ರಾತ್ರಿ ನಾನು ದಕ್ಷಿಣೇಶ್ವರದಲ್ಲಿ ತಂಗಿದ್ದೆ. ಲಾಟು ಮತ್ತು ಗೋಲಾಪ್-ಮಾ ಸಹ ಅಲ್ಲಿದ್ದರು. ಮಾರನೆಯ ದಿನ ಬೆಳಗ್ಗೆ ಶ್ರೀರಾಮಕೃಷ್ಣರು, ಗೋಲಾಪ್-ಮಾ, ಲಾಟು ಮತ್ತು ನಾನು ದೋಣಿಯಲ್ಲಿ ಕೊಲ್ಕತ್ತಕ್ಕೆ ಬಂದೆವು. ಅಲ್ಲಿ ಕುದುರೆಗಾಡಿಯೊಂದನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು ಬೇಡನ್ ಸ್ಕ್ವೇರ್‌ನಲ್ಲಿದ್ದ ವೈದ್ಯರ ಕಛೇರಿಗೆ ಹೋದೆವು. ಶ್ರೀರಾಮಕೃಷ್ಣರು ಕೃಪೆಯಿಟ್ಟು ನನ್ನನ್ನು ತಮ್ಮ ಪಕ್ಕದಲ್ಲೇ ಕೂರಿಸಿಕೊಂಡರು; ಗೋಲಾಪ್-ಮಾ ಮತ್ತು ಲಾಟು ಎದುರಿನ ಆಸನಗಳಲ್ಲಿ ಕುಳಿತುಕೊಂಡರು.

''ವೈದ್ಯರು ಶ್ರೀರಾಮಕೃಷ್ಣರ ಗಂಟಲನ್ನು ಪರೀಕ್ಷಿಸಿ ಕೆಲವು ಔಷಧಿಗಳನ್ನು ಗೊತ್ತುಮಾಡಿದರು. ಅನಂತರ ನಾವು ಆಹಿರಿತೋಲ ಘಾಟ್‌ಗೆ ತೆರಳಿ ಅಲ್ಲಿಂದ ದೋಣಿಯಲ್ಲಿ ದಕ್ಷಿಣೇಶ್ವರಕ್ಕೆ ಹಿಂದಿರುಗಿದೆವು. ಆಗ ಮಧ್ಯಾಹ್ನ ಒಂದೂವರೆ ಗಂಟೆಯಾಗಿತ್ತು. ಯಾರೂ ಏನೂ ತಿಂದಿರಲಿಲ್ಲ. ಶ್ರೀರಾಮಕೃಷ್ಣರಿಗೂ ತುಂಬ ಹಸಿವೆಯಾಗಿತ್ತು. ಅವರು ಅಂಬಿಗನಿಗೆ ವರಾಹನಗರದ ಘಾಟ್‌ನಲ್ಲಿ ದೋಣಿಯನ್ನು ನಿಲ್ಲಿಸುವಂತೆ ಹೇಳಿ, ಹತ್ತಿರದ ಮಾರುಕಟ್ಟೆಯಿಂದ ಸ್ವಲ್ಪ ಸಿಹಿತಿಂಡಿ ತರುವಂತೆ ನನಗೆ ಹೇಳಿದರು. ಗೋಲಾಪ್-ಮಾ ತನ್ನಲ್ಲಿದ್ದ ನಾಲ್ಕು ಕಾಸನ್ನು ಕೊಟ್ಟಳು. ನಾನು ಬೇಗನೆ ಹೋಗಿ ಕೆಲವು ಚಾನಾರ್ ಮುರ್ಕಿ (ಸಣ್ಣ ಸಿಹಿ ಉಂಡೆಗಳು) ಗಳನ್ನು ತಂದೆ. ಶ್ರೀರಾಮಕೃಷ್ಣರು ಸಂತೋಷದಿಂದ ನನ್ನ ಕೈಯಲ್ಲಿದ್ದ ತಿಂಡಿಯ ಪೊಟ್ಟಣವನ್ನು ತೆಗೆದುಕೊಂಡು ಎಲ್ಲವನ್ನೂ ತಿಂದರು. ಅನಂತರ ಅವರು ಖಾಲಿ ಪೊಟ್ಟಣವನ್ನೆಸೆದು, ಬೊಗಸೆಯಿಂದ ಗಂಗೆಯ ನೀರನ್ನು ಮೊಗೆದು ಕುಡಿದರು. ಅವರಿಗೆ ತೃಪ್ತಿಯಾಯಿತು. ಆದರೆ ನಾವು ಮೂರು ಜನರೂ ಹಸಿದಿರುವೆವು ಎಂಬುದು ಅವರಿಗೆ ಗೊತ್ತಿತ್ತು; ಆದರೂ ಸಿಹಿತಿಂಡಿಯನ್ನು ನಮಗೆ ಕೊಡದೆ ತಾವೆ ತಿಂದುಬಿಟ್ಟದ್ದು ಏಕೆಂದು ಆಶ್ಚರ್ಯಪಡುತ್ತಿರುವಷ್ಟರಲ್ಲಿಯೇ ನಮ್ಮೆಲ್ಲರ ಹೊಟ್ಟೆಗಳೂ ತುಂಬಿಹೋದವು! ನಾವು ಮೌನವಾಗಿ ಒಬ್ಬರನ್ನೊಬ್ಬರು ನೋಡಿದೆವು. ಅನಂತರ ಶ್ರೀರಾಮಕೃಷ್ಣರು ನಕ್ಕು ಚಿಕ್ಕ ಹುಡುಗನ ಹಾಗೆ ತಮಾಷೆಯಾಗಿ ಮಾತನಾಡತೊಡಗಿದರು - ಅವರ ಹಾಸ್ಯಲಹರಿ ನಾವು ದಕ್ಷಿಣೇಶ್ವರಕ್ಕೆ ಬಂದು ತಲುಪುವವರೆಗೂ ಮುಂದುವರೆಯಿತು. ದೋಣಿಯಿಂದಿಳಿದ ನಾವೆಲ್ಲರೂ ನಡೆದುದನ್ನು ಚರ್ಚಿಸಿದೆವು; ಒಂದು ಪವಾಡ ನಡೆದುಹೋಯಿತೆಂದು ತೀರ್ಮಾನಿಸಿಕೊಂಡೆವು.'' *(ದೇವರೊಡನೆ ಬಾಳಿದವರು, ಭಾಗ ೧, ಪು.೫೨೬-೨೭)*



# ಶ್ರೀ ಜಯದೇವ (ಭಾಗ ೧)

ಕಥೆ : ಟಿ.ಎಂ. ಸುಂದರರಾಮನ್
ಚಿತ್ರ : ಶಂಕರ್

1 ಹನ್ನೆರಡನೇ ಶತಮಾನದಲ್ಲಿ ಪುರೀಕ್ಷೇತ್ರಕ್ಕೆ ಸಮೀಪದ ಕೆಂದಬಿಲ್ವ ಎಂಬ ಒಂದು ಗ್ರಾಮದಲ್ಲಿ ಭೋಜದೇವ ಹಾಗೂ ಭಾಮಾದೇವಿ ಎಂಬ ದಂಪತಿಗಳಿಗೆ ಮಗನಾಗಿ ಜನಿಸಿದವನೇ ಶ್ರೀ ಜಯದೇವ.

2 ಜಯದೇವನು ವಿದ್ಯಾಭ್ಯಾಸದಲ್ಲಿ ತುಂಬ ಚುರುಕು; ಅದೇ ರೀತಿ ಯಾವಾಗಲೂ ಉನ್ನತ ಆಧ್ಯಾತ್ಮಿಕ ಭಾವದಲ್ಲೇ ಇರುತ್ತಿದ್ದ. ಅವನಿಗೆ ಮದುವೆ ಮಾಡಿಸಬೇಕೆಂದು ಅವನ ಹೆತ್ತವರ ಬಯಕೆ. ಪುರಿಯಲ್ಲಿ ದೇವಶರ್ಮನೆಂಬ ಭಕ್ತನೊಬ್ಬನಿಗೆ ಕನಸಿನಲ್ಲಿ ಶ್ರೀ ಜಗನ್ನಾಥ ಪ್ರಭು ಕಾಣಿಸಿಕೊಂಡ ...




3 ದೇವಶರ್ಮನು ಕೆಂದಬಿಲ್ವ ಗ್ರಾಮಕ್ಕೆ ಹೋಗಿ ಜಯದೇವನ ತಂದೆಯನ್ನು ಭೇಟಿಯಾದ.




4 ಜಯದೇವ ಮತ್ತು ಪದ್ಮಾವತಿ ವಿವಾಹವಾದರು. ಜಯದೇವನು ಶ್ರೀಕೃಷ್ಣನನ್ನು ಕುರಿತು ಕಾವ್ಯರಚನೆ ಮಾಡುತ್ತಿದ್ದ. ಪದ್ಮಾವತಿ ನರ್ತಿಸುತ್ತಿದ್ದಳು. ಈ ರೀತಿ ಇಬ್ಬರೂ ಭಕ್ತಿ ಭಾವವನ್ನು ಬೆಳೆಸಿಕೊಳ್ಳುತ್ತಿದ್ದರು.



5 ಒಂದು ದಿನ ಜಯದೇವನು ಗೀತಗೋವಿಂದ ಕಾವ್ಯದ 19ನೇ ಅಷ್ಟಪದಿಯನ್ನು ರಚಿಸುತ್ತಿದ್ದಾಗ ...




ಈ ಹಾಡಿನ ಅರ್ಥವೇನೆಂದರೆ, ರಾಧೆಯು ತನ್ನ ಪಾದಗಳನ್ನು ಶ್ರೀಕೃಷ್ಣನ ತಲೆಯ ಮೇಲೆ ಇಡುತ್ತಾಳೆ ಎಂದು. ತನ್ನ ಈ ಕಲ್ಪನೆಗೆ ಸ್ವತಃ ಜಯದೇವನೇ ದಿಗ್ಭ್ರಮೆಗೊಂಡ.

6

ಓ ಕೃಷ್ಣಾ! ಇದೆಂಥ ವಿಡಂಬನೆ! ರಾಧೆಯ ಪಾದಗಳನ್ನು ನಿನ್ನ ತಲೆಯ ಮೇಲಿಡುವುದು ನ್ಯಾಯವೆ? ಇದನ್ನು ಊಹಿಸುವದಕ್ಕೂ ನನಗೆ ಸಾಧ್ಯವಿಲ್ಲ.

ಸ್ವಾಮಿ, ನೀವೇಕೆ ಚಿಂತಿಸುತ್ತಿದ್ದೀರಿ?

ಪದ್ಮಾವತಿ, ನಿನಗೆ ಈ ವಿಷಯದ ಬಗ್ಗೆ ಆಮೇಲೆ ಹೇಳುತ್ತೇನೆ. ಈಗ ಈ ತಾಳೆಯ ಗರಿಗಳನ್ನು ಒಳಗಿಡು. ನನ್ನ ಮನಸ್ಸೇಕೋ ಸರಿಯಿಲ್ಲ. ನದಿಗೆ ಹೋಗಿ ಸ್ನಾನ ಮಾಡಿ ಬರುತ್ತೇನೆ.

7

ಜಯದೇವ ನದಿಗೆ ಹೋಗಿ ಸ್ವಲ್ಪ ಹೊತ್ತು ಕಳೆಯುವಷ್ಟರಲ್ಲೇ ಯಾರೋ ಬಾಗಿಲು ಬಡಿದಂತಾಯಿತು. ಪದ್ಮಾವತಿ ಬಾಗಿಲು ತೆರೆದಾಗ ಜಯದೇವ ಒಳಗೆ ಬಂದ.

ಇದೇನು ಸ್ವಾಮಿ? ಈಗತಾನೇ ನೀವು ಸ್ನಾನ ಮಾಡಲು ನದಿಗೆ ಹೋದಿರಿ.

ನನ್ನ ಮನಸ್ಸಿನಲ್ಲೊಂದು ಶ್ಲೋಕ ಮೂಡಿಬಂತು. ತಾಳೆಗರಿಯನ್ನು ತೆಗೆದುಕೊಂಡು ಬಾ. ಈಗಲೇ ನಾನು ಅದನ್ನು ಬರೆದುಬಿಡುತ್ತೇನೆ.

ಜಯದೇವನು ಆ ಶ್ಲೋಕವನ್ನು ಬರೆದು ಮುಗಿಸಿದ. ಸ್ನಾನ ಮಾಡಿ ಊಟ ಮುಗಿಸಿ, ತನ್ನ ಕೋಣೆಗೆ ವಿಶ್ರಾಂತಿಗಾಗಿ ಹೋದ.

8

ಸ್ವಲ್ಪ ಹೊತ್ತಿನ ನಂತರ ನಿಜವಾದ ಜಯದೇವನು ಸ್ನಾನ ಮುಗಿಸಿ ಮನೆಗೆ ಮರಳಿದ. ಪದ್ಮಾವತಿ ಊಟ ಮಾಡುತ್ತಿದ್ದಳು.

ಪದ್ಮಾವತಿ, ಸಾಮಾನ್ಯವಾಗಿ ನೀನು ನನ್ನ ಊಟವಾದ ಮೇಲಷ್ಟೇ ಊಟ ಮಾಡುತ್ತಿದ್ದೆಯಲ್ಲ?

ಸ್ವಾಮಿ, ತಮಾಷೆ ಮಾಡುತ್ತಿದ್ದೀರಾ? ನೀವು ವೇಗವಾಗಿ ಶ್ಲೋಕ ರಚನೆ ಮಾಡಿ, ಊಟ ಮಾಡಿ, ವಿಶ್ರಾಂತಿಗೆ ಹೋದಿರಿ. ಇಷ್ಟು ಬೇಗನೆ ಎಲ್ಲವನ್ನೂ ಮರೆತು ಬಿಡುತ್ತೀರಾ?

ನಾನು ಈಗತಾನೇ ಬಂದೆ. ಎಲ್ಲಿ , ತಾಳೆಗರಿಯನ್ನು ತಂದುಕೊಡು.

9

ಅದನ್ನು ನೋಡಿ ಜಯದೇವನಿಗೆ ಆಶ್ಚರ್ಯವಾಯಿತು. ಆ ಶ್ಲೋಕಗಳನ್ನು ಅವನು ಮನಸ್ಸಿನಲ್ಲಿ ರಚಿಸಿದ್ದನಷ್ಟೆ; ತಾಳೆ ಗರಿಯಲ್ಲಿ ಬರೆದಿರಲಿಲ್ಲ. ಈಗ ತಾಳೆ ಗರಿಯಲ್ಲಿ ಬರೆದಿದ್ದುದನ್ನು ಕಂಡು ಅವನಿಗೆಲ್ಲವೂ ಅರ್ಥವಾಯಿತು — ಇದು ಶ್ರೀಕೃಷ್ಣನ ಲೀಲೆಯೇ ಇರಬೇಕೆಂದು.

ಕೃಷ್ಣ , ನೀನು ರಾಧೆಯ ಮಹಿಮೆಯನ್ನು ಈ ರೀತಿ ನನಗೆ ತಿಳಿಸಿಕೊಡುತ್ತಿದ್ದೀಯಾ? ಪದ್ಮಾವತಿ, ಶ್ರೀಕೃಷ್ಣನ ದರ್ಶನವನ್ನು ಪಡೆದ ನೀನೇ ಧನ್ಯೆ. ಅವನಿಗೆ ಉಣಬಡಿಸುವ ಹಾಗೂ ಅವನ ಪ್ರಸಾದ ಸ್ವೀಕರಿಸುವ ಪುಣ್ಯ ನಿನ್ನದಾಯಿತು.

ಸ್ವಾಮಿ, ಹಾಗಾದರೆ ಇಲ್ಲಿಗೆ ಬಂದವನು ನಮ್ಮ ಶ್ರೀಕೃಷ್ಣ ಪರಮಾತ್ಮನೆ?

ಈ ಘಟನೆಯ ಬಗ್ಗೆ ಕೇಳಿ ತಿಳಿದ ಜನರು ಜಯದೇವನ ‘ಗೀತಗೋವಿಂದ ಕಾವ್ಯ’ದಿಂದ ಆಕರ್ಷಿತರಾದರು.

10

ಪುರೀಕ್ಷೇತ್ರದ ರಾಜನಾದ ಗಜಪತಿಯೂ ಒಬ್ಬ ಕವಿಯಾಗಿದ್ದ. ಅವನು ಒಂದು ದಿನ ಜಯದೇವನನ್ನು ಆಸ್ಥಾನಕ್ಕೆ ಕರೆಸಿದ.

ಜಯದೇವ, ನನ್ನೊಂದಿಗೆ ಸ್ಪರ್ಧಿಸಲು ನೀನು ಆ ಕಾವ್ಯವನ್ನು ರಚಿಸಿದೆಯಾ?




ಸರಿ, ಯಾರ ಕಾವ್ಯ ಶ್ರೇಷ್ಠವೆಂಬುದನ್ನು ಪ್ರಭು ಜಗನ್ನಾಥನೇ ತೀರ್ಮಾನಿಸಲಿ. ನಾವಿಬ್ಬರೂ ಸ್ಪರ್ಧಿಸೋಣ.

ಅವರಿಬ್ಬರೂ ತಮ್ಮ ಕಾವ್ಯದ ತಾಳೆ ಗರಿಗಳನ್ನು ಪ್ರಭು ಜಗನ್ನಾಥನ ಮುಂದಿರಿಸಿ, ಬಾಗಿಲು ಮುಚ್ಚಿ ಅಗಳಿ ಹಾಕಿದರು.

11

ಅಂದು ರಾತ್ರಿ ರಾಜನ ಕನಸಿನಲ್ಲಿ ಜಗನ್ನಾಥ ಪ್ರಭು ಕಾಣಿಸಿಕೊಂಡ.




12

ಮರುದಿನ ಬೆಳಿಗ್ಗೆ ದೇವಾಲಯವನ್ನು ತೆರೆದಾಗ ಜಯದೇವನ ಕಾವ್ಯವು ಜಗನ್ನಾಥ ಪ್ರಭುವಿನ ಪಾದಗಳ ಬಳಿ ಇತ್ತು. ರಾಜನ ಕಾವ್ಯವು ಮಹಾದ್ವಾರದ ಬಳಿ ಇತ್ತು. ತನ್ನ ತಪ್ಪಿಗಾಗಿ ರಾಜನಿಗೆ ಪಶ್ಚಾತ್ತಾಪವುಂಟಾಯಿತು.



13

ಆಹಾ! ಶ್ರೀ ಕೃಷ್ಣಪರಮಾತ್ಮನ ಕೃಪೆಗೆ ಎಣೆಯೇ ಇಲ್ಲ. ಸೇವಕರೆ, ಜಯದೇವನನ್ನು ಸೂಕ್ತ ಮರ್ಯಾದೆಗಳೊಂದಿಗೆ ಆಸ್ಥಾನಕ್ಕೆ ಕರೆತನ್ನಿ.



ಜಯದೇವ ಮತ್ತು ಪದ್ಮಾವತಿ ಕೆಲವು ವರ್ಷಗಳ ಕಾಲ ಅರಮನೆಯಲ್ಲಿ ವಾಸವಾಗಿದ್ದರು. ಅವರು ಶ್ರೀಕೃಷ್ಣ ಹಾಗೂ ರಾಧೆಯರ ಬಗ್ಗೆ ಹಾಡುತ್ತ ಕಾಲ ಕಳೆದರು.

14

ಒಂದು ದಿನ ರಾಜನ ಸಹೋದರ ತೀರಿಕೊಂಡ. ಅವನ ಪತ್ನಿ ಅವನ ಚಿತೆಗೆ ಹಾರಿ ಸತೀಸಹಗಮನ ಮಾಡಿ ಮರಣಹೊಂದಿದಳು – ಅಂದಿನ ಪದ್ಧತಿಯಂತೆ. ಈ ವಿಷಯವನ್ನು ರಾಣಿಯು ಪದ್ಮಾವತಿಗೆ ತಿಳಿಸಿದಳು.

ಪತಿವ್ರತೆಯಾದ ಆಕೆ ತನ್ನ ಪತಿಯ ಚಿತೆಗೆ ಹಾರಿ ತನ್ನ ಪ್ರಾಣತ್ಯಾಗ ಮಾಡಿದಳು.

ನಿಜವಾದ ಪತಿವ್ರತೆ ತನ್ನ ಪತಿಯ ಸಾವಿನ ಸುದ್ದಿ ಕೇಳಿದ ಕೂಡಲೇ ಪ್ರಾಣ ಬಿಡಬೇಕು, ಅಲ್ಲವೆ?



ರಾಣಿಗೆ ಪದ್ಮಾವತಿಯ ಮಾತುಗಳು ಎಷ್ಟು ಪ್ರಾಮಾಣಿಕ ಎಂಬುದನ್ನು ಪರೀಕ್ಷೆ ಮಾಡುವ ಮನಸ್ಸಾಯಿತು.

15 ಒಂದು ದಿನ ಪುರಿಯ ರಾಜನು ಬೇಟೆಗೆ ಹೋದಾಗ ತನ್ನೊಂದಿಗೆ ಜಯದೇವನನ್ನು ಕರೆದುಕೊಂಡು ಹೋದ. ಈ ಅವಕಾಶವನ್ನು ಉಪಯೋಗಿಸಿಕೊಂಡಳು ರಾಣಿ. ಗುಟ್ಟಾಗಿ ಅವಳು ಅಗತ್ಯವಾದ ವ್ಯವಸ್ಥೆಯನ್ನೆಲ್ಲ ಮಾಡಿದಳು. ಅದರಂತೆ, ಒಬ್ಬ ರಾಜಭಟ ಓಡುತ್ತ ಬಂದ ...




16 ಚೀತ್ಕಾರ ಮಾಡುತ್ತ ಕುಸಿದುಬಿದ್ದು, ಪದ್ಮಾವತಿ ಅಲ್ಲೇ ಸತ್ತುಹೋದಳು. ತಮಾಷೆಗಾಗಿ ರಾಣಿಯು ಮಾಡಿದ ಪರೀಕ್ಷೆ ಈಗ ಅನಾಹುತವಾಗಿ ಮಾರ್ಪಟ್ಟಿತು.

ರಾಜ ಮತ್ತು ಜಯದೇವ ಬೇಟೆ ಮುಗಿಸಿ ಮರಳಿದರು.




17





ದೇವರ ನಾಮವನ್ನು ಕೇಳಿದ ತಕ್ಷಣವೇ ಆನಂದಬಾಷ್ಪ ಸುರಿಯದೆ ಇರುವ ತನಕ ಸಾಧನೆ ಆವಶ್ಯಕ. ಭಗವಂತನ ಹೆಸರನ್ನು ಕೇಳಿದ ತಕ್ಷಣವೇ ಯಾರ ಹೃದಯ ಕರಗಿ, ಕಣ್ಣಿನಲ್ಲಿ ಆನಂದಬಾಷ್ಪ ಬರುವುದೋ ಅವನಿಗೆ ಯಾವ ಸಾಧನೆಯೂ ಬೇಕಾಗಿಲ್ಲ.

– ಶ್ರೀರಾಮಕೃಷ್ಣರು.








# ಪೊನ್ನಂಪೇಟೆ ಶ್ರೀರಾಮಕೃಷ್ಣ ಶಾರದಾಶ್ರಮದಿಂದ ನೆರೆಪರಿಹಾರ ಕಾರ್ಯ

ಪೊನ್ನಂಪೇಟೆಯ ಶ್ರೀರಾಮಕೃಷ್ಣ ಶಾರದಾಶ್ರಮವು ಕೊಡಗಿನ ಅನೇಕ ಕಡೆಗಳಲ್ಲಿ ನೆರೆ ಪರಿಹಾರ ವಿತರಣೆಯ ಸೇವೆಯನ್ನು ಕೈಗೊಂಡಿದೆ. ಮೊದಲನೇ ಹಂತದಲ್ಲಿ ಅಧ್ಯಕ್ಷರಾದ ಸ್ವಾಮಿ ಬೋಧ ಸ್ವರೂಪಾನಂದಜೀ ಮಹಾರಾಜ್ ಅವರ ನೇತೃತ್ವದಲ್ಲಿ ತಂಡವೊಂದು ಅನೇಕ ಗಂಜಿಕೇಂದ್ರಗಳಿಗೆ ಭೇಟಿಯಿತ್ತು ಆವಶ್ಯಕತೆಯಿರುವ ವಸ್ತುಗಳ ಪೂರೈಕೆ ಕಾರ್ಯವನ್ನು ಕೈಗೊಳ್ಳಲಾಯಿತು. ಕುಶಾಲನಗರದ ದಂಡಿನಪೇಟೆ, ಬಸಪ್ಪ ಬಡಾವಣೆ, ಇಂದಿರಾ ಬಡಾವಣೆ ಹಾಗೂ ಇತರ ಬಾಧಿತ ಗ್ರಾಮಗಳಾದ ಮಾದಾಪುರ, ತಾಕೇರಿ, ಕಿರಗಂದೂರು, ಕುಂದಾ, ಹಳ್ಳಿಗಟ್ಟು, ಕರಡಿಗೋಡು, ಮಡಿಕೇರಿ ಮುಂತಾದೆಡೆಗಳಿಗೆ ಭೇಟಿಕೊಟ್ಟು ಬಾಧಿತ ಪ್ರದೇಶಗಳ ಮನೆಗಳಿಗೆ ಹಾಗೂ ಗಂಜಿಕೇಂದ್ರಗಳಿಗೆ ಆವಶ್ಯಕತೆಯಿರುವ ಸಾಮಾನು ಸರಂಜಾಮುಗಳನ್ನು ವಿತರಿಸಲಾಯಿತು. ಬೆಂಗಳೂರು, ಮೈಸೂರು, ಶ್ರೀರಂಗಪಟ್ಟಣ, ಹುಬ್ಬಳ್ಳಿ, ದಾವಣಗೆರೆ, ಕುಣಿಗಲ್, ಮಂಡ್ಯ ಮುಂತಾದ ಪ್ರದೇಶಗಳಿಂದ ಆಶ್ರಮದ ಭಕ್ತಾದಿಗಳು ಶ್ರಮಪಟ್ಟು ಕೊಡಗಿನ ಜನತೆಗೆ ವಿತರಣೆ ಮಾಡಲು ನೀಡಿದ್ದ ಸರಕುಗಳನ್ನು ವಿತರಿಸುವಲ್ಲಿ ಆಶ್ರಮವು ಸಕ್ರಿಯವಾಗಿ ಶ್ರಮ ವಹಿಸಿ, ನೆರೆಪರಿಹಾರ ಕಾರ್ಯವನ್ನು ನಡೆಸುತ್ತಿದೆ.

ನೆರೆ ಪರಿಹಾರ ಸಾಮಗ್ರಿಗಳು ಯಥೇಚ್ಛವಾಗಿ ಜಿಲ್ಲೆಗೆ ಹರಿದು ಬರುತ್ತಿರುವುದನ್ನು ಗಮನಿಸಿದ ಆಶ್ರಮವು, ಎರಡನೇ ಹಂತದಲ್ಲಿ ಪುನರ್ವಸತಿಗೊಳ್ಳುವ ಕುಟುಂಬಗಳಿಗೆ ನೇರವಾಗಿ ಕೆಲವು ದಿನಗಳ ಮಟ್ಟಿಗೆ ಮನೆ ನಡೆಸಲು ಗೃಹೋಪಯೋಗಿ ಸಾಮಗ್ರಿಗಳನ್ನು ವಿತರಿಸುವ ಕಾರ್ಯವನ್ನು ಕೈಗೊಂಡಿದೆ.

ಈ ನಿಟ್ಟಿನಲ್ಲಿ ಆಶ್ರಮವು ಒಂದು ಕುಟುಂಬಕ್ಕೆ ಕೆಲವು ದಿನಗಳ ಮಟ್ಟಿಗೆ ಬೇಕಾದ ಮೂಲಭೂತ ವಸ್ತುಗಳ ಒಂದು ಜೋಳಿಗೆಯನ್ನು ತಯಾರಿಸಿ ವಿತರಿಸಿದೆ. ಈವರೆಗೆ ಸುಮಾರು 457 ಕುಟುಂಬಗಳಿಗೆ ವಿತರಿಸಿರುವ ಆಶ್ರಮವು ಕುಶಾಲನಗರದ ಸಾಯಿ ಲೇಔಟ್‌ನಲ್ಲಿ 23, ಮಕ್ಕಂದೂರು-7, ಮಡಿಕೇರಿ ಟೌನ್-3, ಸೀತಾ ಕಾಲೋನಿ, ಕುಂದಾ-45, ಬಸವೇಶ್ವರ ಕಾಲೋನಿ, ಕುಂದಾ-57, ಕರಡಿಗೋಡು-23, ಹಳ್ಳಿಗಟ್ಟು ದೇವಾ ಕಾಲೋನಿ- 48, ಸೋಮವಾರಪೇಟೆ - 20, ಬಸವೇಶ್ವರ ಭವನ್ ಕರಡಿಗೋಡು- 72, ಸರಕಾರಿ ಶಾಲೆ ಕರಡಿಗೋಡು- 40, ಕುಶಾಲನಗರದ ಬಸಪ್ಪ ಲೇಔಟ್ - 6, ಇಂದಿರಾ ಬಡಾವಣೆ-21, ಸಿದ್ದಾಪುರ-59, ತಾಕೇರಿ-13, ಹಾಗೂ 7 ಪತ್ರಕರ್ತರ ಕುಟುಂಬಗಳಿಗೆ ಒಂದೊಂದು ಕಿಟ್‌ಗಳನ್ನು ವಿತರಿಸಿದೆ.

ಒಂದು ಕುಟುಂಬಕ್ಕೆ ಒಂದು ಕಿಟ್‌ನಲ್ಲಿ ಸುಮಾರು 1500 ರೂಪಾಯಿ ಬೆಲೆಬಾಳುವ ವಸ್ತುಗಳಾದ 2ಲೀ. ನೀರು, 1ಲೀ. ಹಾಲು, 5ಕೆ.ಜಿ. ಅಕ್ಕಿ, ಕಂಬಳಿ, ಹೊದಿಕೆ, ಚಾಪೆ, ಸೊಳ್ಳೆ ಬತ್ತಿ, ಮ್ಯಾಗಿ, ಬಿಸ್ಕತ್ತು, ಬೆಂಕಿಪೊಟ್ಟಣ, ಕಾಫಿಪುಡಿ, ಬ್ರಷ್, ಟೂತ್‌ಪೇಸ್ಟ್, ಸೋಪು, ಬಟ್ಟೆ ಸೋಪು, ಮೇಣದ ಬತ್ತಿ, ಟವಲ್, ಅಯೋಡೆಕ್ಸ್, ಸ್ಯಾನಿಟರಿ ಪ್ಯಾಡ್ ಮುಂತಾದ ವಸ್ತುಗಳನ್ನು ವಿತರಿಸಲಾಗಿದೆ.

ಇದಲ್ಲದೆ, ಕರಡಿಗೋಡು ಬಸವೇಶ್ವರ ಗಂಜಿಕೇಂದ್ರದಲ್ಲಿ ಚಾಮುಂಡಿ ಬೆಟ್ಟ ದೇವಾಲಯದ ನೌಕರರ ಸಂಘದಿಂದ ಆಶ್ರಮಕ್ಕೆ ವಿತರಣೆಗೆಂದು ನೀಡಿದ್ದ ಸುಮಾರು 150 ಸೀರೆಗಳನ್ನು ನಿರಾಶ್ರಿತರಿಗೆ ವಿತರಿಸಲಾಯಿತು. ಇದುವರೆಗೆ ಸುಮಾರು 200 ಕಂಬಳಿಗಳನ್ನು ಹಲವಾರು ಕಡೆಗಳಲ್ಲಿ ವಿತರಿಸಲಾಗಿದೆ.

ಗಂಜಿಕೇಂದ್ರದಲ್ಲಿ ನಿರಾಶ್ರಿತರ ಬಟ್ಟೆ ಒಗೆಯುವ ಸಮಸ್ಯೆಗೆ ವಿನೂತನ ರೀತಿಯಲ್ಲಿ ಸ್ಪಂದಿಸಿದ ಆಶ್ರಮವು, ಮಡಿಕೇರಿಯ ಚೌಡೇಶ್ವರಿ ದೇವಾಲಯ ಹಾಗೂ ಬ್ರಾಹ್ಮಣರ ಸಂಘಕ್ಕೆ ಒಂದೊಂದು ವಾಷಿಂಗ್ ಮಿಷಿನ್ ಆವಶ್ಯಕತೆಯನ್ನು ಪೂರೈಸಿದೆ.







# ಕೇರಳದ ನೆರೆ-ಪ್ರವಾಹ ಪಿಡಿತ ಪ್ರದೇಶಗಳಲ್ಲಿ ಪರಿಹಾರಕಾರ್ಯ

**ಈ** ವರ್ಷ ನೈಋತ್ಯ ಮುನ್ಸೂನ್ ಮಳೆಯ ಅಸಾಧಾರಣ ವೈಪರೀತ್ಯದಿಂದಾಗಿ ಕೇರಳದ ಎಲ್ಲೆಡೆ ಸುರಿದ ಧಾರಾಕಾರ ಮಳೆಯಿಂದ ಬಹುತೇಕ ಎಲ್ಲ ನದಿಗಳಲ್ಲೂ ನೆರೆ ಉಕ್ಕಿ ಹರಿದಿದ್ದು, ಹಲವೆಡ ಭೂಕುಸಿತಗಳುಂಟಾಗಿ ಹಲವು ಮಂದಿ ಮೃತ್ಯುವನ್ನಪ್ಪಿದರು. ಹಲವೆಡೆ ಜಾನುವಾರು ಹಾಗೂ ಆಸ್ತಿಪಾಸ್ತಿಗಳಿಗೆ ಹಾನಿಗಳುಂಟಾಗಿವೆ. ಈ ಭೀಕರ ಅನಾಹುತ ನಡೆದ ಪ್ರದೇಶಗಳಲ್ಲಿ ರಾಮಕೃಷ್ಣ ಮಠ-ಮಿಷನ್ನಿನ ಈ ಕೆಳಗಿನ ಶಾಖಾಕೇಂದ್ರಗಳು ಪರಿಹಾರ ಕಾರ್ಯಗಳನ್ನು ನಡೆಸಿವೆ.



1) **ಕೊಯಮತ್ತೂರು ಮಠ**ವು ನೆರೆ ಹಾವಳಿಗೆ ಒಳಗಾದ ಪಾಲಕ್ಕಾಡ್ ಹಾಗೂ ಮಲಪ್ಪುರಂ ಜಿಲ್ಲೆಗಳ ವಿವಿಧ ಪ್ರದೇಶಗಳಲ್ಲಿರುವ 720ಕುಟುಂಬಗಳಿಗೆ 4800 ಕಿಲೋ ಅಕ್ಕಿ, 720ಕಿಲೋ ಬೇಳೆ, 680 ಕಿಲೋ ಈರುಳ್ಳಿ, 288 ಕಿಲೋ ಮಸಾಲೆ ಪದಾರ್ಥಗಳು, 720 ಕಿಲೋ ಉಪ್ಪು, 235 ಲೀಟರ್ ಅಡುಗೆ ಎಣ್ಣೆ, 225 ಕಿಲೋ ಚಹಾಪುಡಿ, 720ಕಿಲೋ ಸಕ್ಕರೆ ಇವುಗಳನ್ನು ಆಗಸ್ಟ್ 21ರಿಂದ 27ರ ವರೆಗೆ ವಿತರಿಸಿತು.

2) **ಕೊಯಮತ್ತೂರು ಮಿಷನ್ ವಿದ್ಯಾಲಯ**ವು ಆಗಸ್ಟ್ 19ರಿಂದ 25ರ ವರೆಗೆ ಪಾಲಕ್ಕಾಡ್ ಮತ್ತು ಇಡುಕ್ಕಿ ಜಿಲ್ಲೆಗಳಲ್ಲಿ ನೆರೆ ಹಾವಳಿಗಳೊಗಾದ 1504 ಜಿಲ್ಲೆಗಳಲ್ಲಿ 4027 ಕಿಲೋ ಅಕ್ಕಿ, 665 ಕಿಲೋ ಬೇಳೆ, 953 ಕಿಲೋ ವಿವಿಧ ತರಕಾರಿ, 665 ಲೀಟರ್ ಅಡುಗೆ ಎಣ್ಣೆ, 3092 ಕಿಲೋ ವಿವಿಧ ದಿನಸಿ ಪದಾರ್ಥ ಗಳು, 2000 ಬನ್ಸ್, 1330 ಬಿಸ್ಕತ್ತಿನ ಪ್ಯಾಕೆಟ್‌ಗಳು, 665 ಕಿಲೋ ಸಕ್ಕರೆ, 1223 ಕಂಬಳಿ, 50 ಟಿ- ಶರ್ಟ್, 25 ಮಹಿಳೆಯರ ಬಟ್ಟೆಬರೆ, 30 ಮಕ್ಕಳ ಉಡುಪು, 1223 ಚಾಪೆ, 460 ನೀರಿನ ಪಾತ್ರೆ, 498 ವಿವಿಧ ಪಾತ್ರೆಗಳ ಸೆಟ್ ಇವನ್ನು ವಿತರಿಸಿತು.

3) **ಹರಿಪಾಡ್** ಆಶ್ರಮವು ಆಗಸ್ಟ್ 27ರಿಂದ 30ರ ವರೆಗೆ ಹರಿಪಾಡ್ ಪ್ರದೇಶದಲ್ಲಿ ನೆರೆಹಾವಳಿಗೊಳಗಾದ 522 ಕುಟುಂಬಗಳಿಗೆ 2610 ಕಿಲೋ ಅಕ್ಕಿ, 634 ಕಿಲೋ ಬೇಳೆ, 763ಲೀಟರ್ ಅಡುಗೆ ಎಣ್ಣೆ, 522 ಕಿಲೋ ಉಪ್ಪು, 522 ಕಿಲೋ ಸಕ್ಕರೆ, 2181 ಲೀಟರ್ ಕುಡಿಯುವ ನೀರು, 522 ಕಂಬಳಿ, 522 ಸೀರೆ, 522 ಲುಂಗಿ/ಧೋತಿ, 522 ಬೆಡ್‌ಶೀಟ್, 317 ಟವೆಲ್, 317 ಚಾಪೆ, 317 ಸೊಳ್ಳೆ ನಿವಾರಕಗಳು, 317 ಕ್ರಿಮಿನಾಶಕ ಔಷಧ, 522 ಬೆಂಕಿ ಪೊಟ್ಟಣ, 522 ಪಾತ್ರೆಗಳ ಸೆಟ್, 522 ಸಾಬೂನು, 281 ಕಿಲೋ ಬ್ಲೀಚಿಂಗ್ ಪೌಡರ್ ಹಾಗೂ 317 ಲೀಟರ್ ಫಿನಾಯಿಲ್ ಇವನ್ನು ವಿತರಿಸಿತು.



4) **ಕಾಲಡಿ ಅದ್ವೈತ ಆಶ್ರಮ**ವು ಆಗಸ್ಟ್ 15ರಿಂದ 7 ದಿನಗಳ ವರೆಗೆ ಆಶ್ರಮದ ಶಾಲೆಯಲ್ಲಿ 1800 ಮಂದಿ ಪ್ರವಾಹ ಪೀಡಿತರಿಗೆ ಆಶ್ರಯ ಕಲ್ಪಿಸಿಕೊಟ್ಟಿತು. ಈ ಆಶ್ರಯ ಶಿಬಿರದಲ್ಲಿ ಮಕ್ಕಳಿಗೆ ಹಾಲು ಹಾಗೂ ರೋಗಿಗಳಿಗೆ ವೈದ್ಯಕೀಯ ನೆರವು ನೀಡಿತು. ಇದಲ್ಲದೆ, ಎರ್ನಾಕುಳಂ ಜಿಲ್ಲೆಯಲ್ಲಿ ನೆರೆ ಹಾವಳಿಗೆ ಒಳಗಾದ 4108 ಕುಟುಂಬಗಳಿಗೆ ಆಗಸ್ಟ್ 10ರಿಂದ 27ರ ವರೆಗೆ ಹಲವು ಪರಿಹಾರ ಸಾಮಗ್ರಿ ಗಳನ್ನು ವಿತರಿಸಿತು. ಇದರಲ್ಲಿ 16,790 ಕಿಲೋ ಅಕ್ಕಿ, 1679 ಕಿಲೋ ಬೇಳೆ, 300 ಕಿಲೋ ತೆಂಗಿನೆಣ್ಣೆ, 979 ಕಿಲೋ ಮಸಾಲೆ ಪದಾರ್ಥಗಳು, 1679 ಕಿಲೋ ಉಪ್ಪು, 1100 ಕಿಲೋ ಸಕ್ಕರೆ, 4108 ಬೆಡ್-ಶೀಟ್, 30 ಟವೆಲ್, 4185 ಪ್ಲಾಸ್ಟಿಕ್ ಚಾಪೆ, 4185 ಬಕೆಟ್, 4185 ಮಗ್, 4108 ಜಗ್, 4185 ಸಾಬೂನು, 4185 ಟೂತ್ ಪೇಸ್ಟ್ ಹಾಗೂ 8216 ಬ್ರಷ್, 1187 ಕ್ರಿಮನಾಶಕ ಔಷಧ, ಹಾಗೂ 500 ಸೊಳ್ಳೆ ನಿವಾರಕ ಕಾಯಿಲ್‌ಗಳು ಸೇರಿವೆ.

5) **ಕೊಚ್ಚಿ** ಆಶ್ರಮವು ಆಗಸ್ಟ್ 20ರಿಂದ 30ರ ವರೆಗೆ ಎರ್ನಾಕುಳಂ ಜಿಲ್ಲೆಯ ಪ್ರವಾಹಪೀಡಿತ 660 ಕುಟುಂಬಗಳಿಗೆ 1750 ಕಿಲೋ ಅಕ್ಕಿ, 1050 ಕಿಲೋ ಬೇಳೆ, 1050 ಕಿಲೋ ವಿವಿಧ ಮಸಾಲೆ ಪದಾರ್ಥಗಳು, 350 ಕಿಲೋ ಉಪ್ಪು, 35 ಕಿಲೋ ಚಹಾ ಪುಡಿ, 350 ಕಿಲೋ ಸಕ್ಕರೆ, 700 ಮಹಿಳೆಯರ ಉಡುಪುಗಳು, 490 ಧೋತಿ, 240ಟಿ-ಶರ್ಟ್, 590 ವಿವಿಧ ಬಟ್ಟೆಬರೆ, 350 ಬೆಡ್‌ಶೀಟ್, 350 ಟವೆಲ್, 350 ಪ್ಲಾಸ್ಟಿಕ್ ಚಾಪೆ ಇತ್ಯಾದಿಗಳನ್ನು ವಿತರಿಸಿತು.




6) **ಕೊಯಿಲಾಂಡಿ** ಆಶ್ರಮವು ಆಗಸ್ಟ್ 14 ರಿಂದ 28ರ ವರೆಗೆ ಕಣ್ಣೂರು ಹಾಗೂ ಕೋಝಿಕೋಡ್ ಜಿಲ್ಲೆಗಳಲ್ಲಿ ನೆರೆಹಾವಳಿಯಿಂದ ಪೀಡಿತರಾದ 1222 ಕುಟುಂಬಗಳಿಗೆ 8253 ಕಿಲೋ ಅಕ್ಕಿ, 2470 ಕಿಲೋ ಬೇಳೆ, 288 ಕಿಲೋ ಸಮೋಲಿನಾ, 2454 ಪ್ಯಾಕೆಟ್ ತಿಂಡಿ ಪದಾರ್ಥಗಳು, 72 ಕಿಲೋ ಚಹಾ ಪುಡಿ, 288 ಕಿಲೋ ಸಕ್ಕರೆ, 342 ಲೀಟರ್ ನೀರು, 100 ಧೋತಿ, 1449 ಲುಂಗಿ, 32 ಶರ್ಟ್, 748 ಟಿ-ಶರ್ಟ್ 171 ಚಡ್ಡಿ, 309 ಸೀರೆ, 621 ಮಹಿಳೆಯರ ಉಡುಪು, 43 ಮಕ್ಕಳ ಉಡುಪು, 1308 ಬೆಡ್-ಶೀಟ್, 1226 ಟವೆಲ್, 288 ಟರ್ಪಾಲಿನ್, 618 ಸಾಬೂನು, 576 ಬಚ್ಚಲುಮನೆ ವಸ್ತುಗಳು, 57 ಕ್ರಿಮಿನಾಶಕ ಔಷಧ, 288 ಬಕೆಟ್ ಹಾಗೂ 288 ಮಗ್ ಇವುಗಳನ್ನು ವಿತರಿಸಿತು.

7) **ಕೋಝಿಕೋಡ್** ಕೇಂದ್ರವು ಆಗಸ್ಟ್ 16ರಿಂದ 26ರ ವರೆಗೆ ವಯನಾಡ್ ಹಾಗೂ ಕೋಝಿಕೋಡ್ ಜಿಲ್ಲೆಗಳಲ್ಲಿ ನೆರೆಹಾವಳಿಗೆ ತುತ್ತಾದ 989 ಕುಟುಂಬಗಳಿಗೆ 6390 ಕಿಲೋ ಅಕ್ಕಿ, 1238 ಕಿಲೋ ಬೇಳೆ, 880 ಬಿಸ್ಕತ್ ಪ್ಯಾಕೆಟ್‌ಗಳು, 10 ಕಿಲೋ ಹಾಲಿನ ಪುಡಿ, 3 ಕಿಲೋ ಚಹಾಪುಡಿ, 10 ಕಿಲೋ ಸಕ್ಕರೆ, 619 ಬೆಡ್-ಶೀಟ್, 644 ಲುಂಗಿ, 669 ಮಹಿಳೆಯರ ಉಡುಪು ಹಾಗೂ 100 ವಿವಿಧ ಉಡುಪುಗಳನ್ನು ವಿತರಿಸಿತು.

8) **ಪಾಲಾ** ಕೇಂದ್ರವು ಆಗಸ್ಟ್ 18 ರಿಂದ 24ರ ವರೆಗೆ ಕೊಟ್ಟಾಯಂ ಹಾಗೂ ಎರ್ನಾಕುಳಂ ಜಿಲ್ಲೆಗಳ ನೆರೆ ಪೀಡಿತ ಕುಟುಂಬಗಳಿಗೆ 225 ಕಿಲೋ ಅಕ್ಕಿ, 120 ಕಿಲೋ ಬೇಳೆ, 20 ಕಿಲೋ ಗೋಧಿ ಪುಡಿ, 10 ಕಿಲೋ ಅಕ್ಕಿ ಪುಡಿ, 20 ತೆಂಗಿನಕಾಯಿ, 4 ಕಿಲೋ ಮಸಾಲೆ ಪದಾರ್ಥಗಳು, 20 ಕಿಲೋ ಉಪ್ಪು, 170 ಬಿಸ್ಕತ್ತಿನ ಪ್ಯಾಕೆಟ್, 2 ಕಿಲೋ ಚಹಾ ಪುಡಿ, 20 ಕಿಲೋ ಸಕ್ಕರೆ, 70 ಸಾಬೂನು, 70 ಬಟ್ಟೆ ತೊಳೆಯುವ ಸಾಬೂನು, 50 ಪ್ಯಾಕೆಟ್ ಪಾತ್ರೆ ತೊಳೆಯುವ ಪುಡಿ, 20 ಟವೆಲ್, 70 ಟೂತ್‌ಪೇಸ್ಟ್ ಹಾಗೂ ಬ್ರಷ್, 50 ಎಣ್ಣೆ ಪದಾರ್ಥಗಳನ್ನು ವಿತರಿಸಿತು.

9) **ತ್ರಿಶೂರ್** ಕೇಂದ್ರವು ತನ್ನ ಹೈಯರ್ ಸೆಕೆಂಡರಿ ಶಾಲೆಯಲ್ಲಿ ಆಗಸ್ಟ್ 14 ರಿಂದ 23ರ ವರೆಗೆ 324 ಮಂದಿ ನೆರೆಹಾವಳಿಗೊಳಗಾದ ಜನರಿಗೆ ಆಶ್ರಯ ನೀಡಿತು. ಇದಲ್ಲದೆ, ಆಗಸ್ಟ್ 23ರಿಂದ 27ರ ವರೆಗೆ ನೆರೆ ಸಂತ್ರಸ್ತ 675 ಕುಟುಂಬಗಳಿಗೆ 1100 ಕಿಲೋ ಅಕ್ಕಿ, 210 ಕಿಲೋ ಬೇಳೆ, 130 ಲೀಟರ್ ಅಡುಗೆ



ಎಣ್ಣೆ, 110 ಕಿಲೋ ಅರಿಶಿಣ, 110 ಕಿಲೋ ಮೆಣಸಿನ ಪುಡಿ, 110 ಕಿಲೋ ಚಹಾಪುಡಿ 365 ಕಿಲೋ ಸಕ್ಕರೆ, 534 ಕಂಬಳಿ, 534 ಸೀರೆ, 534 ಲುಂಗಿ, 534 ಟವೆಲ್, 534 ಚಾಪೆ, 434 ದಿಂಬು, 534 ಬಾರ್ ಹಾಗೂ ಸ್ನಾನದ ಸಾಬೂನು, 534 ಪಾತ್ರೆ ತೊಳೆಯುವ ಸಾಬೂನು ಹಾಗೂ 534 ಬಕೆಟ್‌ಗಳನ್ನು ವಿತರಿಸಿತು.

10) **ತಿರುವಲ್ಲ** ಆಶ್ರಮವು ಆಗಸ್ಟ್ 16ರಿಂದ 26ರ ವರೆಗೆ ನೆರೆ-ಪ್ರವಾಹ ಪೀಡಿತ 1484 ಕುಟುಂಬಗಳಿಗೆ 2386 ಕಿಲೋ ಅಕ್ಕಿ, 485 ಕಿಲೋ ಗೋಧಿಪುಡಿ, 11 ಕಿಲೋ ಶ್ಯಾವಿಗೆ, 971 ಕಿಲೋ ಬೇಳೆ, 2067 ಪ್ಯಾಕೆಟ್ ಬಿಸ್ಕತ್ತು/ರಸ್ಕ್, 55 ಪ್ಯಾಕೆಟ್ ಮಕ್ಕಳ ಆಹಾರ, 25 ಕಿಲೋ ಚಹಾಪುಡಿ, 971 ಕಿಲೋ ಸಕ್ಕರೆ, 65 ಲೀಟರ್ ಕುಡಿಯುವ ನೀರು, 721 ಧೋತಿ, 261 ಲುಂಗಿ, 344 ಟಿ-ಶರ್ಟ್, 610 ಸೀರೆ, 1259 ಮಹಿಳೆಯರ ಉಡುಪು, 200 ವಿವಿಧ ಉಡುಪು, 1386 ಬೆಡ್‌ಶೀಟ್, 1305 ಟವೆಲ್, 1274 ಚಾಪೆ, 683 ಬಕೆಟ್, 100 ಅಡುಗೆ ಪಾತ್ರೆ, 181 ಗ್ಲಾಸು, 100 ಸೌಟು, 281 ಪ್ಲೇಟು, 100 ಕಿಲೋ ಬ್ಲೀಚಿಂಗ್ ಪೌಡರ್, 1432 ಸ್ನಾನದ ಸಾಬೂನು, 181 ಬಟ್ಟೆ ತೊಳೆಯುವ ಸಾಬೂನು, 300 ಬಚ್ಚಲು ಮನೆ ಪದಾರ್ಥಗಳು, 181 ಮಗ್, 181 ಪ್ಯಾಕೆಟ್ ಮೋಂಬತ್ತಿ, 181 ಪ್ಯಾಕೆಟ್ ಬೆಂಕಿಪೊಟ್ಟಣ, 306 ಬ್ರಷ್, 206 ಟೂತ್‌ಪೇಸ್ಟ್, 404 ಕೊಡೆ, 404 ವೈಪರ್, 81 ಸೊಳ್ಳೆ ನಿವಾರಕ ಕಾಯಿಲ್ ಹಾಗೂ ಇತರ ಪದಾರ್ಥಗಳನ್ನು ವಿತರಿಸಿತು.

# ಕಲೆಯ ಮೂಲಕ ಸ್ವಾಮಿ ವಿವೇಕಾನಂದರೊಂದಿಗೆ ಒಂದು ಸಂವಾದ

ಸ್ವಾಮಿ ವಿವೇಕಾನಂದರು ಚಿಕಾಗೋದಲ್ಲಿ ಮಾಡಿದ ಉಪನ್ಯಾಸಗಳ ೧೨೫ನೇ ವಾರ್ಷಿಕೋತ್ಸವದ ಅಂಗವಾಗಿ ಬೆಂಗಳೂರು ರಾಮಕೃಷ್ಣ ಮಠದಲ್ಲಿ ನಾಲ್ಕು ದಿನಗಳ ಸೃಜನಶೀಲ ಕಲಾ ಶಿಬಿರವು ನಡೆಯಿತು. **‘ಕಲೆಯ ಮೂಲಕ ಸ್ವಾಮಿ ವಿವೇಕಾನಂದರೊಂದಿಗೆ ಒಂದು ಸಂವಾದ’** ಎಂಬ ಶೀರ್ಷಿಕೆಯಲ್ಲಿ ನಡೆದ ನಾಲ್ಕು ದಿನಗಳ ಶಿಬಿರವು ೨೦೧೮ರ ಜುಲೈ ೩೦ರಿಂದ ಆಗಸ್ಟ್ ೨ರ ವರೆಗೆ ನಡೆಯಿತು.

ಬೆಂಗಳೂರಿನ ಕೆಲವು ಪ್ರಮುಖ ಕಲಾಶಾಲೆಗಳನ್ನು ಸಂಪರ್ಕಿಸಿ, ಅಲ್ಲಿ ವ್ಯಾಸಂಗ ಮಾಡುತ್ತಿರುವ ಕಲಾ ವಿದ್ಯಾರ್ಥಿಗಳನ್ನು ಶಿಬಿರದಲ್ಲಿ ಭಾಗವಹಿಸುವಂತೆ ಬೇಡಿಕೊಳ್ಳಲಾಗಿತ್ತು. ಅದಕ್ಕೆ ಅನುಗುಣವಾಗಿ ೩೫ ಮಂದಿ ವಿದ್ಯಾರ್ಥಿಗಳು ಈ ಶಿಬಿರದಲ್ಲಿ ಭಾಗವಹಿಸಿದ್ದರು.

ಜುಲೈ ೩೦ರಂದು ನಡೆದ ಉದ್ಘಾಟನಾ ಸಮಾರಂಭದ ಬಳಿಕ ಶಿಬಿರಾರ್ಥಿಗಳಿಗೆ ಸ್ವಾಮಿ ವಿವೇಕನಂದರ ಜೀವನ ಹಾಗೂ ಸಂದೇಶಗಳ ಪರಿಚಯವನ್ನು ಭಾಷಣ, ವೀಡಿಯೋ ಪ್ರದರ್ಶನ, ಚಿಕಾಗೊ ಉಪನ್ಯಾಸಗಳಿಂದ ಆಯ್ದ ಭಾಗಗಳ ವಾಚನ ಇವುಗಳ ಮೂಲಕ ಮಾಡಿಕೊಡಲಾಯಿತು. ಪ್ರಸಿದ್ಧ ಭಾಷಣಕಾರರೂ, ಸಮಾಜ ಸೇವಾ ಕಾರ್ಯಕರ್ತರೂ ಆದ ಶ್ರೀ ಚಕ್ರವರ್ತಿ ಸೂಲಿಬೆಲೆಯವರು ಶಿಬಿರದ ಆಶಯ ಭಾಷಣ ಮಾಡಿದರು. ಅನಂತರ ಆಚಾರ್ಯ ಸ್ಕೂಲ್ ಆಫ್ ಡಿಸೈನ್‌ನ ವಿಭಾಗ ಮುಖ್ಯಸ್ಥರಾದ ಶ್ರೀ ರಮೇಶ್ ಚಂದ್ರ, ಬೆಂಗಳೂರು ವಿಶ್ವವಿದ್ಯಾಲಯದ ದೃಶ್ಯ ಕಲಾ ವಿಭಾಗದ ಪ್ರಾಚಾರ್ಯರಾದ ಶ್ರೀ ಜಯಕುಮಾರ್ ಅವರು ಭಾಷಣ ಮಾಡಿದರು. ಶಿಬಿರಾರ್ಥಿಗಳ ಜೊತೆಗೆ ಪ್ರಶ್ನೋತ್ತರ ಸಂವಾದ ನಡೆಸುತ್ತ ಅವರು ತಮ್ಮ ಕಲಾನುಭವ ಹಾಗೂ ಬೋಧನಾನುಭವಗಳನ್ನು ಅವರೊಂದಿಗೆ ಹಂಚಿಕೊಂಡರು. ಚಿಕಾಗೋ ವಿಶ್ವಧರ್ಮಸಮ್ಮೇಳನದಲ್ಲಿ ಸ್ವಾಮೀಜಿಯವರ ಅನುಭವಗಳನ್ನು ಕುರಿತಂತೆ ೨೫ ವಿಷಯಗಳನ್ನು ಶಿಬಿರಾರ್ಥಿಗಳ ಮುಂದೆ ಪ್ರಸ್ತುತಪಡಿಸಲಾಯಿತು.

ಜುಲೈ ೩೧, ಆಗಸ್ಟ್ ೧ ಹಾಗೂ ೨ ರಂದು ಶಿಬಿರಾರ್ಥಿಗಳು ಸ್ವಾಮಿ ವಿವೇಕಾನಂದರನ್ನು ಹಾಗೂ ಅವರ ಬೋಧನೆಗಳನ್ನು ಕುರಿತಂತೆ ತಮ್ಮ ಭಾವನೆಗಳನ್ನು ವರ್ಣಚಿತ್ರ, ಮಣ್ಣಿನ ಮೂರ್ತಿ ಹಾಗೂ ವೈರ್ ಮೂರ್ತಿಗಳ ಮೂಲಕ ಅಭಿವ್ಯಕ್ತಿಗೊಳಿಸಿದರು. ಶಿಬಿರಾರ್ಥಿಗಳ ಉತ್ಸಾಹ ಹಾಗೂ ಸೃಜನಶೀಲ ರಚನೆಗಳ ಮೂಲಕ ೩ ದಿನಗಳಲ್ಲಿ ತಮ್ಮ ಭಾವನೆಗಳ ವಿಚಾರ ವಿನಿಮಯ ಮಾಡಿಕೊಂಡ ಬಗೆ ಗಮನಾರ್ಹವಾಗಿತ್ತು. ಬೆಂಗಳೂರು ರಾಮಕೃಷ್ಣ ಮಠವು ಚಿಕಾಗೋ ಉಪನ್ಯಾಸಗಳ ೧೨೫ನೇ ವಾರ್ಷಿಕೋತ್ಸವದ ಅಂಗವಾಗಿ ನಡೆಸಲಿರುವ ವಸ್ತುಪ್ರದರ್ಶನದಲ್ಲಿ ಈ ರಚನೆಗಳು ಮೂಲ ಆಕರಗಳಾಗಿ ಕಾರ್ಯನಿರ್ವಹಿಸಲಿವೆ. ವಿದ್ಯಾರ್ಥಿಗಳ ಪಾಲಿಗೆ ಇದೊಂದು ಅದ್ಭುತ ಕಾರ್ಯಕ್ರಮವಾಗಿತ್ತು. ಇದಕ್ಕೆ ಅವಕಾಶ ಮಾಡಿಕೊಟ್ಟ ರಾಮಕೃಷ್ಣ ಮಠಕ್ಕೆ ತಾವು ಚಿರಋಣಿಗಳಾಗಿರುವುದಾಗಿ ಅವರು ತಮ್ಮ ಧನ್ಯತಾಭಾವವನ್ನು ವ್ಯಕ್ತಪಡಿಸಿದರು. ಈ ಮೂಲಕ ಸ್ವಾಮಿ ವಿವೇಕಾನಂದರನ್ನು ಇನ್ನಷ್ಟು ತಿಳಿದುಕೊಳ್ಳುವ, ಹಾಗೂ ಅವರ ಜೀವನ-ಸಂದೇಶಗಳಗಳನ್ನು ಕಲೆಯ ಮೂಲಕ ಹೆಚ್ಚು ಹೆಚ್ಚು ಪ್ರಕಟಗೊಳಿಸುವ ಇಚ್ಛೆಯನ್ನು ಅವರು ವ್ಯಕ್ತಪಡಿಸಿದರು. ಇಡೀ ಶಿಬಿರದ ಆಯೋಜನೆಯನ್ನು ಆಶ್ರಮದ ಸ್ವಾಮಿ ರಘುರಾಮಾನಂದಜಿಯವರು ನೆರವೇರಿಸಿದರು.







Managing Editor : Swami Atmajnanananda Editor : Swami Jnanayogananda
Printed and Published by Swami Atmajnanananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# OUR OTHER INTERNATIONAL GROUP TOURS



## 8 Days - Thailand & Cambodia | 8 ದಿನಗಳ ಕಾಂಬೋಡಿಯ – ಥೈಲ್ಯಾಂಡ್

**SIEM REAP** : The World famous & biggest temple complex in the middle of water, Bayon Temples, Night Market, Ta Prohm, Floating Village on Tonle Sap Lake, Cambodian Cultural Village, Shopping at Night market.

**BANGKOK** : Bangkok City tour, Safari World, Marine Park, Golden Buddha Temple, Reclining Buddha Temple, Shopping at Indra square.

**PATTAYA** : Alcazar Show, Coral Island Tour in speed boat, Walkers Street, Thai Cultural show Elephant Show , Nong Nooch Village.



## 8 Days - Sri Mukthinatha Yatra | 8 ದಿನಗಳ ನೇಪಾಳ ವಿಶೇಷ - ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ)

**SRI MUKTHINATHA (Saligramam) :** Gandaki River, Narasimha Temple, Jwala Mai, Ramanuja Kuta, Pokhara, Bindhya Basini Temple, Fewalake Devi Temple, Jomsom, Manaokamana Devi Temple by Cable Car, Kathmandu, city tour (Pasupathinath Temple, Jala Narayan Temple, Sri Krishna Temple at Patan) etc.



## 10 Days - China, Hong Kong & Macau | 10 ದಿನಗಳ ಚೈನಾ, ಹಾಂಕಾಂಗ್, ಮಕಾವ್

**BEIJING :** Tiananmen Square, Olympic site Bird Nest, Acrobatic show in Beijing, Summer Palace Kunming Lake Cruise, Visit The Great Wall of China, Forbidden City Cruise from Imperial Garden to Summer Palace.

**SHANGHAI :** Temple in Shanghai. Visit to Oriental Pearl TV Tower and observation deck, Cruise on Huangpu River, World famous Shanghai Museum, People Square, Nanjing Street Area, Shanghai Tower - tallest tower in China

**HONG KONG :** Ocean Park, Visit Victoria Peak, Night View at Waterfront, Lantau Island Ngong Ping village Po Lin Monastery, Market Hong Kong. Hong Kong – Macau - Hong Kong - Transfers by Ferry.

**MACAU :** Macau City Tour, Night Tour of Macau, Visit Macau Casino.



## 19 Days - Australia & New Zealand | 19 ದಿನಗಳ ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡ್

**AUSTRALIA :** Melbourne, Sydney, Gold Coast, Cairns - **NEW ZEALAND** : Auckland, Rotorua, Christchurch, Queenstown

**ATTRACTIONS ON TOUR :** Sea World - Australia's best Marine Park, Warner Brother's Movie World, Kuranda – A World Heritage Rainforest, Kuranda Skyrail rain forest Cable Car, Kuranda Scenic Rail, Great Barrier Reef, Inside guided tour of world famous Melbourne Cricket Ground, Sea life Marine Park, Spectacular Showboat dinner cruise, Sydney Tower Eye, Milford Sound cruise, Gondola ride - the steepest cable car (Queenstown), Puzzling world at Wanaka, Sky Tower at Auckland, Sheep show of Agrodome Farm, TE-PUIA thermal village, Waitomo Glowworm Caves and Many more…



## 5 Days - Dubai, Abu Dhabi & Sharjah | 5 ದಿನಗಳ ದುಬೈ, ಅಬುಧಾಬಿ, ಶಾರ್ಜ

**DUBAI** : Dubai City Tour, Desert Safari Tour with BBQ Dinner, Belly Dance, Tanoora Show and other activities, Dhow Cruise with Buffet Dinner at the Dubai Creek, World tallest and popular building Burj Khalifa with Entrance tickets, Dubai Aquarium at Dubai Mall, Musical Fountain in Dubai Mall, Miracle Garden Tour, Monorail Ride at Dubai, Abu Dhabi City Tour with Yas Mall Abu Dhabi, Visit world famous Grand Mosque, Visit different Malls in - Mall of The Emirates, Gold Souq, and Dubai Mall, Global Village…Shopping paradise at global village, Sharjah City tour - Pearl of the Gulf.



## 18 Days - Grand U.K. & Europe | 18 ದಿನಗಳ ಗ್ರ್ಯಾಂಡ್ ಯು.ಕೆ.–ಯುರೋಪ್

**COVERING 10 COUNTRIES** : United Kingdom, France, Netherlands, Belgium, Germany, Switzerland, Austria, Liechtenstein, Italy, Vatican.

**MAJOR CITIES COVERED** : London, Paris, Amsterdam, Brussels, Heidelberg, Cologne, Lucerne, Interlaken, Innsbruck, Vaduz, Rome, Pisa, Vatican City, Vatican.

***For more details please Contact :***




BASAVANAGUDI
#98, 1st Floor, DVG Road
Office 080-26621983, 26617178
Mobile +91 9880079588 / 9900080793




MALLESHWARAM
# 198, 1st Floor, 11th Cross
Office 080 - 23445598, 23445559
Mobile +91 9900080796 / 9880079644

**www.orchidtours.net**

VIVEKA PRABHA (KANNADA MONTHLY)
November 2018, Vol.19. No.11 No. of pages: 44

Registered With Registrar of News Papers of India
under 72356/2000. postal Regn. No.KA/SK/MYS/480/
2018-20. LICENCED TO POST W.P.P.AT YADAVAGIRI
MYSORE-570 020, VIDE LICENCE NO. SK/WPP/MYS/155/2018-20



''ಯಾರು ಭಗವಚ್ಚಿಂತನೆ ಮಾಡುತ್ತಾರೊ, ಯಾರು ವಿಷಯಗಳಲ್ಲಿ ಆಸಕ್ತಿ — ಕಾಮ ಕಾಂಚನದಲ್ಲಿ ಆಸಕ್ತಿ ತೊಲಗಿ ಹೋಗಲು ಹಗಲೂ ಇರುಳೂ ಭಗವಂತನ ಪ್ರಾರ್ಥನೆ ಮಾಡುತ್ತಾರೊ, ಯಾರಿಗೆ ವಿಷಯ ರಸ ಕಹಿಯಾಗಿ ತೋರುವುದೊ, ಯಾರಿಗೆ ಹರಿಪಾದಪದ್ಮಸುಧೆ ಹೊರತು ಬೇರೆ ಏನೂ ರುಚಿಸದೊ ಅಂಥವರ ಸ್ವಭಾವ ಹಂಸಪಕ್ಷಿಯ ಹಾಗೆ ಆಗಿಬಿಟ್ಟಿರುತ್ತದೆ. ಹಂಸದ ಎದುರು ನೀರು ಬೆರೆಸಿದ ಹಾಲನ್ನು ಇಡಿ. ಅದು ನೀರನ್ನು ಬಿಟ್ಟು ಹಾಲನ್ನು ಕುಡಿದುಬಿಡುತ್ತದೆ. ಅದರ ನಡೆಯನ್ನು ನೀನು ನೋಡಿಲ್ಲವೇನು? ಅದು ನೇರವಾಗಿ ಮುಂದುಮುಂದಕ್ಕೆ ಮುಂಬರಿದುಬಿಡುತ್ತದೆ. ಶುದ್ಧ ಭಕ್ತರ ನಡೆಯೂ ಕೇವಲ ಭಗವಂತನ ಕಡೆಗೆಯೇ. ಅವರಿಗೆ ಬೇರೆ ಏನೂ ಬೇಕಾಗಿಲ್ಲ; ಅವರಿಗೆ ಬೇರೆ ಯಾವುದೂ ರುಚಿಸದು.''

*— ಶ್ರೀರಾಮಕೃಷ್ಣ ಪರಮಹಂಸರು*

Printed at Mayur Graphics, Bangalore